# ಗೀತಾನಾಗಭೂಷಣರವರ 'ಬದುಕು ಮತ್ತು ಬಾಡಿ' ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ)

ಸಂಶೋಧಕರು
ನಾಯಕರ ಜಯಮ್ಮ
ನೋಂ ಸಂಖ್ಯೆ : ೧೬೦೧೦೪೦೩೦೦೧೩

ಮಾರ್ಗದರ್ಶಕರು
ಡಾ. ಎ. ಮೋಹನ ಕುಂಟಾರ್
ಪ್ರಾಧ್ಯಾಪಕರು



ಭಾಷಾ ನಿಕಾಯ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩. ೨೭೬
೨೦೧೬-೧೭

# ಗೀತಾನಾಗಭೂಷಣರವರ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅರ್ಪಿಸಿದ ನಿಬಂಧ)



ಸಂಶೋಧಕರು
**ನಾಯಕರ ಜಯಮ್ಮ**
ನೊಂದಣಿಸಂಖ್ಯೆ : ೧೬೦೧೦೪೦೩೦೦೧೩

ಮಾರ್ಗದರ್ಶಕರು
**ಡಾ. ಎ. ಮೋಹನ ಕುಂಟಾರ್**
ಪ್ರಾಧ್ಯಾಪಕರು



**ಭಾಷಾ ನಿಕಾಯ**
**ಭಾಷಾಂತರ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
**ವಿದ್ಯಾರಣ್ಯ ೫೮೩ ೨೭೬**
**೨೦೧೬–೧೭**

# ಮಾರ್ಗದರ್ಶಕರ ದೃಢೀಕರಣ ಪತ್ರ

**"ಗೀತಾನಾಗಭೂಷಣರವರ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಶ್ರೀಮತಿ ನಾಯಕರ ಜಯಮ್ಮ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪ್ರಸ್ತುತ ನಿಬಂಧವಾಗಲೀ ಅಥವಾ ಯಾವುದೇ ಭಾಗವನ್ನಾಗಲೀ ಈ ಮೊದಲು ಬೇರೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೯.೦೨.೨೦೧೨

ಸ್ಥಳ : ವಿದ್ಯಾರಣ್ಯ

(ಸಹಿ)

**(ಡಾ. ಎ.ಮೋಹನ ಕುಂಟಾರ್)**
ಮಾರ್ಗದರ್ಶಕರು ಹಾಗೂ
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಪ್ರಮಾಣ ಪತ್ರ

**"ಗೀತಾನಾಗಭೂಷಣರವರ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ೨೦೧೬-೧೭ನೇ ಶೈಕ್ಷಣಿಕ ಸಾಲಿನಲ್ಲಿ ವಿಭಾಗದ ಪ್ರಾಧ್ಯಾಪಕರಾದ ಡಾ.ಎ.ಮೋಹನ ಕುಂಟಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಎಂ.ಫಿಲ್. ಪದವಿಯ ಅಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ನಿಬಂಧವನ್ನು ಪೂರ್ಣವಾಗಿಯಾಗಲಿ, ಅಂಶಿಕವಾಗಿಯಾಗಲಿ ಯಾವುದೇ ಪದವಿಗಾಗಿ ಈ ಮೊದಲು ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

N. Jayamma

**(ನಾಯಕರ ಜಯಮ್ಮ)**

ದಿನಾಂಕ : 31.07.2017

ಸ್ಥಳ : ವಿದ್ಯಾರಣ್ಯ

ಎಂ.ಫಿಲ್. ವಿದ್ಯಾರ್ಥಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# <u>ಪ್ರಮಾಣ ಪತ್ರ</u>

**"ಗೀತಾನಾಗಭೂಷಣರವರ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ೨೦೧೬-೧೭ನೇ ಶೈಕ್ಷಣಿಕ ಸಾಲಿನಲ್ಲಿ ವಿಭಾಗದ ಪ್ರಾಧ್ಯಾಪಕರಾದ ಡಾ.ಎ.ಮೋಹನ ಕುಂಟಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಎಂ.ಫಿಲ್. ಪದವಿಯ ಅಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ನಿಬಂಧವನ್ನು ಪೂರ್ಣವಾಗಿಯಾಗಲಿ, ಅಂಶಿಕವಾಗಿಯಾಗಲಿ ಯಾವುದೇ ಪದವಿಗಾಗಿ ಈ ಮೊದಲು ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

N. Jayamma

**(ನಾಯಕರ ಜಯಮ್ಮ)**

ದಿನಾಂಕ :

ಸ್ಥಳ :

ಎಂ.ಫಿಲ್. ವಿದ್ಯಾರ್ಥಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

**"ಗೀತಾನಾಗಭೂಷಣರವರ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ಮಹಿಳಾ ಸಂವೇದನೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಶ್ರೀಮತಿ ನಾಯಕರ ಜಯಮ್ಮ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪ್ರಸ್ತುತ ನಿಬಂಧವಾಗಲೀ ಅಥವಾ ಯಾವುದೇ ಭಾಗವನ್ನಾಗಲೀ ಈ ಮೊದಲು ಬೇರೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೧. ೦೨. ೨೦೧೨

ಸ್ಥಳ : ವಿದ್ಯಾರಣ್ಯ

(ಸಹಿ)

**(ಡಾ. ಎ.ಮೋಹನ ಕುಂಟಾರ್)**
ಮಾರ್ಗದರ್ಶಕರು ಹಾಗೂ
ಪ್ರಾಧ್ಯಾಪಕರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

# ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

**ಪ್ರಸ್ತಾವನೆ :**

ಕನ್ನಡ ಸಾಹಿತ್ಯ ಸಂದರ್ಭದಲ್ಲಿ 'ಸಂವೇದನೆ' ಎಂಬ ಪದ ಹಿಂದಿನಿಂದ ಬಳಕೆಯಲ್ಲಿದೆ. ಕನ್ನಡದಲ್ಲಿ ಇಂಗ್ಲೀಷನ 'ಸೆನ್ಸಿಬಿಲಿಟಿ' ಎಂಬ ಪದ ಸಂವೇದನೆ ರೂಪದಲ್ಲಿ ಕಾಣಬಹುದು. ವ್ಯಕ್ತಿಯ ಅನುಭವಕ್ಕೆ ವಿಶಿಷ್ಟವಾದ ಭಾವನಾತ್ಮಕ ಮತ್ತು ಬೌದ್ಧಿಕ ಪ್ರಕ್ರಿಯೆ ಎಂಬ ಅರ್ಥದಲ್ಲಿ ಅದೊಂದು ತಾತ್ವಿಕ ಪರಿಭಾಷೆಯಾಗಿ ಹೊಸ ಮೈಯನ್ನು ಪಡೆದುಕೊಂಡಿದೆ. 'ದಲಿತ ಸಂವೇದನೆ, ಮುಸ್ಲಿಂ ಸಂವೇದನೆ, ಮಹಿಳಾ ಸಂವೇದನೆ ಎನ್ನುವ ಸೈದ್ಧಾಂತಿಕ ನೆಲೆಗಳಲ್ಲಿ ಸಂವೇದನೆಯು ಬಳಕೆಯಲ್ಲಿದೆ.

ಮಹಿಳಾ ಸಂವೇದನೆಯ ಮಾತು ಇತ್ತೀಚಿನದಾದರೂ ಸಂವೇದನೆ ಪದ ಇತ್ತೀಚಿನದಲ್ಲ. ಸಂವೇದನೆಯ ಸ್ವರೂಪ ಕಾಲ-ಕಾಲಕ್ಕೆ ಬೇರೆ-ಬೇರೆ ರೀತಿಯಾಗಿರಬಹುದು. ಆದರೆ ಅದು ಬೇರೆ ಬೇರೆ ನೆಲೆಗಳಿಂದ ಪ್ರೇರಿತವಾಗಿರಬಹುದು. ಈ ಹಿನ್ನೆಲೆಯಲ್ಲಿ ಕನ್ನಡದ ಒಂದು ಶತಮಾನ ಕಾಲದ ಇತಿಹಾಸವಿರುವ ಕಾದಂಬರಿ ಎನ್ನುವ ಗದ್ಯ ಬರವಣಿಗೆ ಬದುಕಿನ ಸಮಗ್ರತೆಯ ಒಳನೋಟಗಳನ್ನು ಸೂಕ್ಷ್ಮವಾಗಿ ಅವಲೋಕಿಸುವ ಮತ್ತು ನಿರ್ವಹಿಸುವ ಕೆಲಸವನ್ನು ಮಾಡುತ್ತಲೇ ಬಂದಿದೆ. ಹಾಗಾಗಿ ಕಾದಂಬರಿಗಳು ಸಮಾಜ ಸಂಸ್ಕೃತಿಯನ್ನು ಸಾಹಿತ್ಯದಲ್ಲಿ ಅನುಭವದ ಮೂಲಕ ವ್ಯಕ್ತಪಡಿಸುವಂತಹವೇ ಆಗಿವೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಮಾಜವು ಹೆಣ್ಣನ್ನು ಎರಡು ಬಗೆಯಲ್ಲಿ ಕಂಡರಿಸಿದೆ. ಮಾತೆಯಾಗಿ, ಮಾಯೆಯಾಗಿ, ಮತ್ತು ಮಾತೆಯಾಗಿ ಆಕೆ ಮಾನ್ಯಳು ಉಳಿದಂತೆ ಆಕೆ ಮರಳು ಮಾಡುವವಳು ಎಂಬುದಾಗಿ ಪ್ರಸ್ತುತ ದಿನಮಾನಗಳಲ್ಲಿಯೂ ಗುರುತಿಸಲಾಗುತ್ತಿದೆ. ಇಂತಹ ಸಾಂಸ್ಕೃತಿಕ ಹಿನ್ನೆಲೆಯಿಂದ ಕಟ್ಟಿಕೊಂಡ ಮಹಿಳಾ

ಸಮುದಾಯವು ಕಾವ್ಯಗಳಲ್ಲಿ ಬಹುಪಾಲು ಪೂರಕ ಹಾಗೂ ಪೋಷಕ ಪಾತ್ರವಾಗಿ ರೂಪಗೊಂಡಿದೆ. ಮಹಿಳೆಯನ್ನು ಎರಡನೇಯ ದರ್ಜೆಯವಳೆಂದು ಭಾವಿಸಿ ಪುರುಷ ಪ್ರಧಾನ ಸಮಾಜವನ್ನು ಸೃಷ್ಟಿಸಿಕೊಂಡಿತು. ಎಲ್ಲಾ ಅಂಶಗಳಲ್ಲೂ ಪುರುಷ ಶ್ರೇಷ್ಠ, ಮಹಿಳೆ ಕನಿಷ್ಟವೆಂದು ಭಾವಿಸಿ ಅವಳ ಕರ್ತವ್ಯ ಆಸೆ, ಆಕಾಂಕ್ಷೆ, ಶಕ್ತಿ ಸಾಮರ್ಥ್ಯಗಳನ್ನು ಕಡೆಗಣಿಸಿಕೊಂಡು ಬರಲಾಯಿತು.

ಒಂದು ಕಾಲದ ಸಮಾಜದಲ್ಲಿ ಅತ್ಯುನ್ನತ ಘನತೆ ಗೌರವದ ಸ್ಥಾನಮಾನ ಪಡೆದಿದ್ದ ಮಹಿಳೆ ಮತ್ತೊಮ್ಮೆ ಕೀಳಾಗಿ ಶೋಷಿಸಿಲ್ಪಟ್ಟಳು. ಇತಿಹಾಸದುದ್ದಕ್ಕೂ ಮಹಿಳೆಯ ಅಂತಸ್ತು ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಬದಲಾವಣೆಗಳು ಕಂಡುಬಂದಿವೆ. ಹೀಗೆ ಪರಿವರ್ತನೆಗೊಳ್ಳುತ್ತಾ ಬಂದಿರುವ ಮಹಿಳೆಯ ಬದುಕು ಇಂದಿನ ಸ್ಥಿತಿಯ ಅಧ್ಯಯನ ಅತ್ಯಂತ ಕುತೂಹಲಕಾರಿ ಮತ್ತು ಮಹತ್ವಪೂರ್ಣವಾದುದು. ಕನ್ನಡದ ಸಂದರ್ಭದಲ್ಲಿ ಸ್ತ್ರೀಪರ ಚಿಂತನೆಗಳ ವಿಕಾಸ ಕ್ರಮವನ್ನು ಸ್ಥೂಲವಾಗಿ ಗುರುತಿಸಿಕೊಳ್ಳುತ್ತಾ ಸಮಕಾಲೀನ ಸಾಹಿತ್ಯದಲ್ಲಿ ಅದರ ಸ್ವರೂಪವನ್ನು ಗಮನಿಸುವುದು ಹೆಚ್ಚು ಸೂಕ್ತವೆನಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ಸ್ತ್ರೀಪರತೆಯ ವಿಕಾಸವನ್ನು ಗಮನಿಸುವುದಕ್ಕಿಂತ ಪೂರ್ವದಲ್ಲಿ ಅಕ್ಷರ ಪ್ರಪಂಚಕ್ಕೆ ಸಮಾನಾಂತರವಾಗಿ ಬೆಳೆದ ಮೌಖಿಕ ಪರಂಪರೆಯನ್ನು ಗಮನಿಸಬೇಕಾಗುತ್ತದೆ. ಮೌಖಿಕ ಪರಂಪರೆಯಲ್ಲಿ ಕಥನ ಕಲೆಯು ಮಹಿಳೆಗೆ ಸಹಜವಾಗಿ ಸಿದ್ಧಿಸಿದ ಅಭಿವ್ಯಕ್ತಿ ಅಕ್ಷರದ ಅರಿವಿನಿಂದ ಬಹುಕಾಲ ವಂಚಿತಳಾಗಿಯೇ ಉಳಿದ ಸ್ತ್ರೀ ಮೌಖಿಕ ನೆಲೆಯಲ್ಲಿ ತನ್ನದೇ ಆದ ಭಿನ್ನ ಅಭಿವ್ಯಕ್ತಿ ಕ್ರಮವನ್ನು ರೂಢಿಸಿಕೊಂಡಿರುವುದನ್ನು ಗಮನಿಸಬಹುದು. ಈ ವಮೌಖಿಕ ನೆಲೆಯಲ್ಲಿ ಆಕೆ ಪಡೆದುಕೊಂಡ ಅಭಿವ್ಯಕ್ತಿ ಸ್ವಾತಂತ್ರ್ಯವೂ ಗಮನಾರ್ಹವಾದುದು ಇಲ್ಲೆಲ್ಲ ಸ್ತ್ರೀ ತನ್ನ ಕುರಿತು ಮಾತನಾಡುತ್ತಲೇ ಇಡೀ ಸ್ತ್ರೀ ಸಮುದಾಯದ ಕುರಿತು ಚಿಂತಿಸುವುದನ್ನು ಕಾಣಬಹುದು. ಶಿಷ್ಟ ಸಾಹಿತ್ಯದಲ್ಲಿ ಕಾಣಸಿಗದ ಸ್ತ್ರೀಯ ವಿಶಿಷ್ಟ ಅನುಭವ ಲೋಕವು ಜನಪದ ಸಾಹಿತ್ಯದಲ್ಲಿ ಕೇಳಲು ಸಿಗುತ್ತದೆ. ಸಾಮಾಜಿಕ ಚಳುವಳಿಯ ಬೆಂಬಲವಾಗಲಿ, ರಾಜಾಶ್ರಯವಾಗಲಿ ಇಲ್ಲದ ಸಾಮಾನ್ಯ ಹಿನ್ನೆಲೆಯಿಂದ ಬಂದ ಈ ಕವಯತ್ರಿ ತಮ್ಮ ಅಭಿವ್ಯಕ್ತಿಯನ್ನು ಸಾಧಿಸಿದ್ದೇ ಒಂದು ಮುಖ್ಯ ವಿಚಾರವಾಗುತ್ತದೆ.

ಆಧುನಿಕ ಸಾಹಿತ್ಯದ ಸಂದರ್ಭದಲ್ಲಿ ನವೋದಯ, ಪ್ರಗತಿಶೀಲ, ಮತ್ತು ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಲೇಖಕಿಯರ ಸಂಖ್ಯೆ ಹೆಚ್ಚು ಕಂಡುಬರುತ್ತದೆ. ನಂಜನಗೂಡಿನ ತಿರುಮಲಾಂಬ (೧೮೮೭-೧೯೮೨) ಅವರಿಂದ ಹಿಡಿದು ದಲಿತ ಬಂಡಾಯದ ಗೀತಾನಾಗಭೂಷಣರ (೧೯೭೦-೯೦) ವರೆಗಿನ ಸಾಹಿತ್ಯದ ಅವಧಿಯನ್ನು ಅವಲೋಕಿಸಿದಾಗ ಕೊಡಗಿನ ಗೌರಮ್ಮ, ಎಂ.ಕೆ.ಇಂದಿರಾ, ತ್ರಿವೇಣಿ, ವಾಣಿ, ಅನುಪಮಾ

ನಿರಂಜನಾ, ವೀಣಾಶಾಂತೇಶ್ವರ ಈ ಮುಂತಾದ ಲೇಖಕಿಯರ ಬರವಣಿಗೆಗಿಂತಲೂ ದಲಿತ ಬಂಡಾಯ ಸಂದರ್ಭದಲ್ಲಿ ಬಂದ ಗೀತಾನಾಗಭೂಷಣರ ಬರವಣಿಗೆ ಭಿನ್ನವಾಗಿ ಕಂಡುಬರುತ್ತದೆ. ವ್ಯವಸ್ಥೆಯ ತಾರತಮ್ಯ ಲಿಂಗಾಧಾರಿತ ಅಸಮಾನತೆಯ ಪುರುಷ ಪ್ರಧಾನ ನೆಲೆಗಳನ್ನು ಪಲ್ಲಟಗೊಳಿಸಿ ಬರೆದವರಲ್ಲಿ ಗೀತಾನಾಗಭೂಷಣರು ಪ್ರಮುಖರೆನಿಸುತ್ತಾರೆ.

ಸ್ವಾತಂತ್ರ್ಯ ಪೂರ್ವದಲ್ಲಿ ಹುಟ್ಟಿದ ಗೀತಾನಾಗಭೂಷಣರು ಅನಕ್ಷರಸ್ಥ ಕಡುಬಡತನದ ಕುಟುಂಬದಲ್ಲಿ ಜನಿಸಿ, ಮೇಲ್ವರ್ಗದವರ ಹೀಗಳಿಕೆಯ ಮಧ್ಯದಲ್ಲಿ ಅಕ್ಷರ ದಕ್ಕಿಸಿಕೊಂಡು ಲೇಖನಿ ಹಿಡಿದ ಛಲಗಾರ್ತಿಯಾಗಿದ್ದಾರೆ. ಅದೆಷ್ಟೋ ಸಲ ಮನುಷ್ಯನಿಗೆ ಪ್ರತಿಕೂಲ ಪರಿಸ್ಥಿತಿ ಎದೆಗುಂದಿಸುತ್ತದೆ. ಆದರೆ ಕೆಲವೊಮ್ಮೆ ಪ್ರತಿಕೂಲ ಪರಿಸ್ಥಿತಿಗಳಿಂದ ಕಲಿಯುವಷ್ಟು ಜೀವನಭಾರ ಜೀವನ ಅನುಭವ ಬೇರೆ ಯಾವುದರಿಂದಲೂ ಸಾಧ್ಯವಿಲ್ಲ. ಸಮಸ್ಯೆಗಳು ವ್ಯಕ್ತಿಯನ್ನು ಗಟ್ಟಿಗೊಳಿಸುತ್ತ ಹೋಗುತ್ತವೆ. ಹಾಗೇ ಬದುಕಿನ ಅನುಭವದಿಂದ ಗಟ್ಟಿಗೊಂಡ ವಿರಳ ಸಾಹಿತಿಗಳಲ್ಲಿ ಮೊದಲಿಗರು.

ಉತ್ತರ ಕರ್ನಾಟಕದ ಹಿಂದುಳಿದ ಜನಾಂಗದಲ್ಲಿ ಜನಿಸಿದ ಗೀತಾನಾಗಭೂಷಣರು ಸಾವಳಗಿಯಂಥ ಸಣ್ಣ ಹಳ್ಳಿಯಲ್ಲಿ ಬೆಳೆದು ಕಾದಂಬರಿ ಲೋಕದಲ್ಲಿ ಬೆಳಗಿದ ಪ್ರತಿಭಾವಂತರು ಪ್ರಗತಿಶೀಲಾ ಬಂಡಾಯವನ್ನು ಮೈಗೂಡಿಸಿಕೊಂಡು ಕಲ್ಬುರ್ಗಿಯ ದೇಸಿ ಭಾಷೆಯ ನುಡಿಗಟ್ಟಿಗಳುಳ್ಳ ಆಡುಮಾತಿನಲ್ಲಿ ಶೋಷಣೆಯ ವಿಭಿನ್ನ ಮುಖಗಳನ್ನು ಎತ್ತಿ ತೋರುತ್ತ ಪಿತೃ ಪ್ರಧಾನ್ಯದ ವಂಚಕ ಬುದ್ಧಿಯನ್ನು ಮತ್ತು ಗಂಡಿನ ವಿಕೃತ ಕಾಮವನ್ನು ಬಯಲಿಗೆಳೆಯುತ್ತ ದಲಿತ ಹೆಣ್ಣುಮಕ್ಕಳ ಗೋಳನ್ನು ಜೀವಂತವಾಗಿ ಚಿತ್ರಿಸಿದ್ದಾರೆ.

ಪ್ರಗತಿಶೀಲ ಮನೋಭಾವದ ಲೇಖಕಿಯರು ಕತೆ ಕಾದಂಬರಿಗಳಲ್ಲಿ ಹೆಣ್ಣಿನ ಸಮಸ್ಯೆಗಳಿಗೆ ಅಡಿಪಾಯವಾಗಿರುವ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ, ರಾಜಕೀಯ, ದೃಷ್ಟಿಕೋನದ ವಿವೇಚನೆಯನ್ನು ಸಾಮಾಜಿಕ ನೆಲೆಗಟ್ಟಿನ ಮೇಲೆ ಮಾಡಿದ್ದಾರೆ. ಅವರ ಸ್ತ್ರೀ ಪಾತ್ರಗಳು ವಿರಳವಾಗಿ ಪರಿಸ್ಥಿತಿಯೊಂದಿಗೆ ರಾಜಿಮಾಡಿಕೊಂಡರೂ ಬಹುಮಟ್ಟಿಗೆ ಪ್ರತಿಭಟಿಸುತ್ತವೆ. ಸಮಸ್ಯೆಗಳನ್ನು ಎದುರು ಹಾಕಿಕೊಂಡು ಪ್ರವಾಹದ ವಿರುದ್ಧ ಈಜಲು ಸಿದ್ಧವಾಗುವ ದಿಟ್ಟಪಾತ್ರಗಳನ್ನು ಚಿತ್ರಿಸಿದ್ದಾರೆ.

ಮಹಿಳಾ ಸಂವೇದನೆ ಸಂದರ್ಭದಲ್ಲಿ ಮಾತನಾಡುವಾಗ ಕೆಳವರ್ಗದ ಮಹಿಳೆಯರ ಮೇಲಿನ ದೌರ್ಜನ್ಯ, ಶೋಷಣೇ ಅವರ ಮೂಢನಂಬಿಕೆಗಳು, ಮೂರ್ಖತನ, ನೋವು–ಸಂಕಟಗಳು ವಾಸ್ತವದ ದುರಂತಗಳಿಗೆ ಕನ್ನಡಿ ಹಿಡಿದು ಕಲ್ಬುರ್ಗಿಯ ಶಕ್ತಿಯುತವಾದ ದೇಸಿ ಕನ್ನಡದಲ್ಲಿ ನಿಸ್ಸಂಕೋಚವಾಗಿ ಧೈರ್ಯದಿಂದ ಬರೆದಿದ್ದಾರೆ. ಅಮಾಯಕ

ದಲಿತ ಹೆಂಗಸರ ಬಗ್ಗೆ ಕೇಳಗೇರಿ, ಕೊಳಗೇರಿಯ, ನಗರದಂಚಿನ ಝೋಪಡಿ ಪಟ್ಟಿಯ ಮುಗ್ಧ ಮೂಢ ಹೆಂಗಸರ ಮೇಲೆ ನಡೆಯುವ ಅನ್ಯಾಯ-ಅತ್ಯಾಚಾರ-ಲೈಂಗಿಕತೆ ಹಾದರ ಇವುಗಳನ್ನು ಕುರಿತು ಮೇಲ್ವರ್ಗದ ಲೇಖಕಿಯರು ಬರೆಯಲಾರದ ಬದುಕಿನ ಸತ್ಯಗಳನ್ನು ನೋವು-ಹತಾಶೆಗಳನ್ನು ಅನಾವರಣಗೊಳಿಸಿ ಬರೆದಿರುವವರಲ್ಲಿ ಮೊದಲಿಗರು. ಕಾದಂಬರಿಗೆ ಆರಿಸಿಕೊಳ್ಳುವ ವಸ್ತುವಿನ ನಾವೀನ್ಯತೆಮತ್ತು ಬಳಸುವ ಭಾಷೆಯಲ್ಲಿಯ ಹೊಸತನದಿಂದಾಗಿ ಅವರ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ತಮ್ಮದೇ ಆದ ಗಟ್ಟಿ ನೆಲೆಯನ್ನು ಕಂಡುಕೊಂಡಿವೆ. ಅನಕ್ಷರಸ್ಥ ಹಳ್ಳಿಯ ಹೆಣ್ಣಿನ ಶೋಷಣೆಯ ಬಗ್ಗೆ ಈ ಹಿಂದೆ ಕನ್ನಡದಲ್ಲಿ ಇಷ್ಟೊಂದು ತೀವ್ರವಾಗಿ ಯಾವ ಲೇಖಕಿಯೂ ದಾಖಲಿಸಿಲ್ಲ. ಮಧ್ಯಮ ವರ್ಗದ ಲೇಖಕಿಯರೂ ಈ ಅಮಾಯಕ ಹೆಣ್ಣುಮಕ್ಕಳ ಸ್ಥಿತಿಗತಿಯ ಬಗ್ಗೆ ವಿಶೇಷ ಕಾಳಜಿ ವಹಿಸಿದ್ದಿಲ್ಲ. ಉಪವಾಸ ವನವಾಸ ಬಿದ್ದು ಹರಕು ಬಟ್ಟೆಯ ಈ ಹೆಂಗಸರು ಮುರುಕು ಮನೆಯಲ್ಲಿ ಬದುಕುತ್ತಿರುವುದಾದರೂ ಹೇಗೆ? ಇವರ ಸಮಸ್ಯೆಗಳೇನು? ಸಂಘರ್ಷದ ನೆಲೆಗಳು ಯಾವ ಸ್ವರೂಪದವುಗಳು ಎನ್ನುವುದರ ಕಡೆಗೆ ಹೆಚ್ಚಿನ ಗಮನವೇ ಹರಿಯಲಿಲ್ಲ. ಹೆಂಗಸರ ದಾರುಣತೆಯ ಹಲವಾರು ಮಗ್ಗಲುಗಳನ್ನು ಬಿಚ್ಚಿಟ್ಟಿಲ್ಲ ಜಾತಿ ನೆಲೆಯ ಸಾಮಾಜಿಕ ಅವಮಾನದ ಸಂಕಟ, ದೌರ್ಜನ್ಯ, ದಬ್ಬಾಳಿಕೆಯ ನೋವು, ವರ್ಗನೆಲೆಯ ಮಾನಸಿಕ, ದೈಹಿಕ ಕೌರ್ಯ, ಅವಮಾನ ನುಂಗಿ, ಕಣ್ಣೀರನ್ನು ಕಣ್ಣಲ್ಲೇ ಇಂಗಿಸುವ ಅವರ ನಿತ್ಯ ಚಡಪಡಿಕೆಗಳನ್ನು ತೀವ್ರವಾದ ಸಂವೇದನಾತ್ಮಕವಾದ ಕಾದಂಬರಿಗಳ ರೂಪದಲ್ಲಿ ಅಕ್ಷರ ಜಗತ್ತಿನ ಮುಂದೆ ಅನಾವರಣಗೊಳಿಸಿದರೆನ್ನುವುದು ದಾಖಲಾರ್ಹ ಸಂಗತಿ. ಮಹಿಳಾ ಲೋಕದ ಯಾತನೆಯ ಬದುಕಿನ ಬಗ್ಗೆ ಬರೆಯುವ ಗುರುತರ ಜವಾಬ್ದಾರಿಯನ್ನು ಲೇಖಕಿಯಾಗಿ ನಿರ್ವಹಿಸಿದ ವಿಧಾನವು ಅವರ ಸಾಮಾಜಿಕ ಕಾಳಜಿ ಮತ್ತು ಸ್ತ್ರೀಪರ ಚಿಂತನೆಗೆ ಶಕ್ತಿಯುತ ಮಾದರಿಯಾಗಿದೆ.

ಸಮಸ್ಯೆಗಳ ಸುಳಿಯಲ್ಲಿ ಸಿಕ್ಕರೂ ಬದುಕುವ ಛಲವಂತಿಕೆಯನ್ನು ತಮ್ಮ ಕಾದಂಬರಿಗಳ ಸ್ತ್ರೀ ಪಾತ್ರಗಳ ಮೂಲಕ ಕಟ್ಟಿಕೊಡುತ್ತಾರೆ. ಇತ್ತೀಚೆಗೆ ಬಂದ ದಲಿತ ಹಿಂದುಳಿದ ಲೇಖಕಿಯರೂ ತಮ್ಮ ಅನುಭವಗಳನ್ನು ಹೇಳಿಕೊಳ್ಳುವ, ನೋವನ್ನು ದಾಖಲಿಸುವ ಒತ್ತಡಕ್ಕೆ ಒಳಗಾಗಿರುವುದು ಗೀತಾ ಅವರ ದಿಟ್ಟ ಅಭಿವ್ಯಕ್ತಿಯ ಫಲವಾಗಿದೆ. ತಮ್ಮ ಜನಾಂಗದ ಸ್ತ್ರೀ ಬದುಕಿನ ಅವಮಾನ, ತಿರಸ್ಕಾರ, ಶೋಷಣೆಯನ್ನು ತೆರೆದಿಡುವ ಸಂವೇದನಾ ಶೀಲತೆಯನ್ನು ತೋರುತ್ತಾರೆ.

ಸಾಮಾಜಿಕ ನ್ಯಾಯದ ಎಚ್ಚರವಹಿಸಿದ ಕಾರಣವಾಗಿ ಅಸ್ಪೃಶ್ಯತೆ, ಜಾತಿವ್ಯವಸ್ಥೆಯ ಆ ಪರ್ವದಲ್ಲಿ ಮುಳುಗಿದವರ ಪರವಾಗಿ ಸಾವಿರಾರು ವರ್ಷಗಳಿಂದ ಆರ್ಥಿಕವಾಗಿ,

ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ತುಳಿತಕ್ಕೊಳಗಾದ ಜನತೆಯ, ಹಳ್ಳಿಯ ಕೆಳವರ್ಗದ ಜಾತಿ ಜನಾಂಗಗಳ ಶೋಷಿತ ಮಹಿಳೆಯರ ಬದುಕು–ಬವಣೆಗಳು ದಾಖಲುಗೊಂಡವು. ಸಾಮಾಜಿಕ ಸಾಂಪ್ರದಾಯಿಕ ಬಿಕ್ಕಟ್ಟುಗಳನ್ನು ಎದುರಿಸಿ ದಮನಕ್ಕೊಳಗಾದವರ ಸಂವೇದನೆಗಳನ್ನು ತಮ್ಮ ಕಾದಂಬರಿಗಳ ಮೂಲಕ ಅಭಿವ್ಯಕ್ತಿಸಿದ ಕೆಳವರ್ಗದ ಲೇಖಕಿಯರಲ್ಲಿ ಪ್ರಮುಖರಾಗಿದ್ದಾರೆ. ಸ್ತ್ರೀ ಸಮಸ್ಯೆಗಳಿಗೆ ಸ್ತ್ರೀ ಸಾಹಿತ್ಯವು ಉತ್ತಮ ಪರಿಹಾರ ಸೂಚಿಸಬಲ್ಲದು ಇವರ ಸಾಹಿತ್ಯದಲ್ಲಿ ಮೂಡಿಬರುವ ಮಹಿಳಾ ಸಂವೇದನೆಗಳು ಜೀವನಾನುಭವದ ಹಿನ್ನೆಲೆಯಲ್ಲಿ ಮೂಡಿಬಂದುದರಿಂದ ಸಮಸ್ಯೆಗಳು ಸ್ಪಷ್ಟವಾಗಿ ಓದುಗರ ಮೇಲೆ ತೀವ್ರ ಪರಿಣಾಮ ಬೀರಿ ಸ್ತ್ರೀ ಶೋಷಣೆಯನ್ನು ಖಂಡಿಸಿ, ಸಮಾನತೆಯನ್ನು ಹೇಳುತ್ತಲೆ ಚಿಂತನೆಗೆ ಹಚ್ಚುತ್ತವೆ. ಜೊತೆಗೆ ಸಮಸ್ಯೆಗಳ ಪರಿಹಾರ, ಸಾಧನೆಗಳತ್ತ ಗಮನ ಹರಿಸುವಂತೆ ಮಾಡುತ್ತವೆ. ಇವರು ತಮ್ಮ ಒಟ್ಟು ಸಾಹಿತ್ಯದಲ್ಲಿ ಸುತ್ತಲಿನ ಶೋಷಿತ ಮಹಿಳೆಯರ ಸೂಕ್ಷ್ಮ ಸಂವೇದನೆಗಳಿಗೆ ಸ್ಪಂದಿಸಿ, ಆಕೆಯ ಸಮಸ್ಯೆಗಳನ್ನು ವಸ್ತುನಿಷ್ಠ ದೃಷ್ಟಿಕೋನದಿಂದ ಅಭಿವ್ಯಕ್ತಿಪಡಿಸಿರುವ ವಿಶಿಷ್ಟ ಲೇಖಕಿಯೆಂದು ಗುರುತಿಸಲಾಗುತ್ತಿದೆ.

ಹೀಗೆ ಕನ್ನಡದಲ್ಲಿ ಹಿಂದುಳಿದ ಅನಕ್ಷರಸ್ಥ ಮಹಿಳೆಯರ ಶೋಷಣೆಗಳನ್ನು ಕುರಿತು ಕಾದಂಬರಿ ಬರೆದ ಲೇಖಕಿಯರಲ್ಲಿ ಗೀತಾನಾಗಭೂಷಣರು ಮೊದಲಿಗರಾಗಿದ್ದಾರೆ. ಕೆಳವರ್ಗದ ಸಂವೇದನೆಯ ಕಾದಂಬರಿಗಳ ಜೊತೆಗೆ ಬಂಡಾಯದ ಸ್ತ್ರೀವಾದಿ ಹಿನ್ನೆಲೆಯಲ್ಲಿಯೂ ಕಾದಂಬರಿ ರಚಿಸಿ ಪ್ರಜ್ಞಾವಂತ ಓದುಗರ ಗಮನ ಸೆಳೆದಿದ್ದಾರೆ. ಬಂಡಾಯದ ಗಟ್ಟಿ ಧ್ವನಿಯಾದ ಇವರು ಯಾರು ಕಡೆಗಣಿಸಿದರೂ ಮೂಲೆ ಸೇರದ, ಮಾಸಿ ಹೋಗದ, ಜೀವವರ ಲೇಖನಿಯಿಂದ ನಾಲ್ಕು ದಶಕಗಳಿಂದ ಕಾದಂಬರಿಗಳನ್ನು ರಚಿಸಿ ಸಾರಸ್ವತ ಲೋಕದಲ್ಲಿ ತಮ್ಮ ಸ್ಥಾನವನ್ನುಗಳಿಸಿಕೊಂಡ ಲೇಖಕಿ. ಕಾದಂಬರಿಗಳ ಸತ್ವ ಸಾಧ್ಯತೆಗಳ ಸಾಂಸ್ಕೃತಿಕ ಸಾಹಿತ್ಯಿಕ ಮಹಿಳಾ ಸಂವೇದನೆಯ ನೆಲೆಗಳನ್ನು ಕುರಿತ ಅಧ್ಯಯನವು ಪ್ರಸ್ತುತ ಸಂಶೋಧನೆಯ ಕೇಂದ್ರ ಪ್ರಜ್ಞೆಯಾಗಿದೆ.

**೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

ಲೇಖಕಿಯು ರಚಿಸಿದ ಒಟ್ಟು ಕಾದಂಬರಿಗಳ ಕಥಾವಸ್ತು ವೈಶಿಷ್ಟತೆ ಹಾಗೂ ಸಮಕಾಲೀನ ಲೇಖಕಿಯರಿಗಿಂತಲೂ ಇವರ ಕಾದಂಬರಿಗಳ ಕಥಾ ವಸ್ತುವಿನ ಧೋರಣೆಗಳೇನು? ಆಶಯಗಳೇನು? ರಾಜ್ಯದ ಹಿಂದುಳಿದ ಪ್ರದೇಶ ಉತ್ತರ ಕರ್ನಾಟಕದವರಾದ ಲೇಖಕಿಯು ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯನ್ನು ಅರ್ಥಮಾಡಿಕೊಂಡು ದಲಿತ, ಗ್ರಾಮೀಣ ಬದುಕಿನ ವಿವಿಧ ಸ್ತರಗಳನ್ನು ವಾಸ್ತವವಾಗಿ ಹೇಗೆ ದಾಖಲಿಸಿದ್ದಾರೆ, ಇವರ ಕಾದಂಬರಿಗಳು ಹೇಗೆ ಸಮಕಾಲಿನ ವಾಸ್ತವಿಕತೆಗೆ

ಹೊಂದಿಕೊಂಡು ಶೋಷಣೆಯ ಮುಖಗಳನ್ನು ಬಿಂಬಿಸುತ್ತ ಬಂದಿವೆ. ಎಂಬುದನ್ನು ಕುರಿತು ಸಮಗ್ರವಾಗಿ ಅವಲೋಕಿಸುವುದು ಪ್ರಸ್ತುತ ಸಂಪ್ರಬಂಧದ ಉದ್ದೇಶವಾಗಿದೆ.

ಕಾದಂಬರಿಕಾರ್ತಿ ಕಂಡಂತೆ ಮಹಿಳೆಗೆ ಎದುರಾಗುವ ಸನ್ನಿವೇಶ, ಅವಳ ಪ್ರತಿಭಟನಾ ರೀತಿ ಸೋಲು-ಗೆಲುವುಗಳು ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸುವುದು, ಕಾದಂಬರಿಗಳ ಹಿನ್ನೆಲೆಯಲ್ಲಿ ಪರಿವರ್ತನಾಶೀಲ ಸಮಾಜದಲ್ಲಿ ಮಹಿಳೆಯ ಸ್ಥಾನಮಾನವನ್ನು ಗುರುತಿಸುವ ಪ್ರಯತ್ನವನ್ನು ನಡೆಸಲಾಗಿದೆ. ಜೊತೆಗೆ ಮಹಿಳಾಪರ ಕಾಳಜಿಗಳ ಮೇಲೆ ಮತ್ತು ಸಮಾಜದ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಳ್ಳುವ ಮಹಿಳೆಯ ಹೋರಾಟದ ಮೇಲೆ ಬೆಳಕು ಬೀರುವ ಉದ್ದೇಶವನ್ನು ಹೊಂದಿದೆ. ಗೀತಾ ನಾಗಭೂಷಣ ಉತ್ತರ ಕರ್ನಾಟಕ ಪ್ರದೇಶದ ಗುಡಿಸಲಿನಲ್ಲಿ ಹುಟ್ಟಿ ಕೂಲಿ ಕಾರ್ಮಿಕರ ನಡುವೆ ಬೆಳೆದವರು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ ಮೊದಲ ಮಹಿಳೆ ಎಂಬ ಕೀರ್ತಿ ಇವರದ್ದು, ಅಲ್ಲದೇ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷಸ್ಥಾನ ಪಡೆದ ಮೊದಲ ಮಹಿಳೆಯೂ ಆಗಿದ್ದಾರೆ. ಇವರು ದಲಿತ ಶೂದ್ರ ಹೆಣ್ಣಿನ ಬಾಳನ್ನು ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಇವರ ಕಾದಂಬರಿಗಳ ಮೂಲಕ ತಳ ಸಮುದಾಯದ ಹೆಣ್ಣುಮಕ್ಕಳ ಬದುಕಿನ ಸ್ಥಿತಿಗತಿಯನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಮಹಿಳೆಯ ಬದುಕಿನ ಸ್ಥಿತಿಗತಿಯ ನಿರ್ಣಯದಲ್ಲಿ ಜಾತಿ ಪದ್ಧತಿ, ಲಿಂಗ ತಾರತಮ್ಯ ವರ್ಗ ವ್ಯವಸ್ಥೆಗಳು ನಿರ್ಣಾಯಕ ಅಂಶಗಳಾಗಿರುತ್ತವೆ. ಬದುಕು ಮತ್ತು ಬರಹದಿಂದ ಕೆಳವರ್ಗದ, ಕೆಳಜಾತಿಯ ಮಹಿಳೆಯ ಸ್ಥಿತಿಗತಿ, ಸ್ಥಾನಮಾನಗಳನ್ನೂ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಪುರಾತನ ಕಾಲದಿಂದಲೂ ಧರ್ಮ ಭಾರತೀಯ ಜನ ಜೀವನವನ್ನು ನಿಯಂತ್ರಿಸಿದೆ. ಅದೇ ರೀತಿ ಲೋಕಾರೂಢಿ, ಆಚರಣೆಗಳು, ನೈತಿಕ ನಿಯಮಗಳು ಮಾನವ ಜೀವನದಲ್ಲಿ ಬೆರೆತು, ಕಾನೂನಿನಂತೆ ಕೆಲಸ ಮಾಡುತ್ತಿವೆ. ಇಂತಹ ಧಾರ್ಮಿಕ ನಂಬಿಕೆಗಳಿಂದ, ಲೋಕರೂಢಿಗಳಿಂದ, ಸಂಪ್ರದಾಯಗಳಿಂದ ಮಹಿಳೆಯ ಬದುಕಿಗೆ ಒಂದೆಡೆ ರಕ್ಷಣೆ, ಇನ್ನೊಂದೆಡೆ ಶೋಷಣೆಯಾಗಿದೆ. ಇವರ ಕಾದಂಬರಿಗಳ ಸ್ತ್ರೀಪಾತ್ರಗಳ ಮೂಲಕ ಅವರ ಜಾತಿಯೊಳಗಿನ ಧಾರ್ಮಿಕ ನಂಬಿಕೆಗಳು, ರೂಢಿ ಆಚರಣೆಗಳು, ಸಂಪ್ರದಾಯಗಳು ಅಲ್ಲಿನ ಮಹಿಳೆಯ ಬದುಕನ್ನು ಹೇಗೆ ರೂಪಿಸಿವೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಮಹಿಳೆಯರು ತಮ್ಮನ್ನು ಬಂಧಿಸಿರುವ ಕಟ್ಟುಪಾಡುಗಳನ್ನು ಮೀರಿ ಹೇಗೆ ಬೆಳೆಯಬಲ್ಲರು ಎಂಬುದನ್ನು ಗ್ರಹಿಸುವ ಮುಖ್ಯ ಉದ್ದೇಶ ಇಲ್ಲಿನದಾಗಿದೆ.

ಪ್ರಸ್ತುತ ಮಹಿಳೆಯರ ಸ್ಥಾನಮಾನ ಸಮಾನತೆಯ ಯುಗ ಸ್ತ್ರೀಪುರುಷರ ನಡುವಿನ ತಾರತಮ್ಯವನ್ನು ಬದಿಗೊತ್ತಿ ಮಹಿಳೆಗೂ ಪುರುಷನಂತೆಯೇ ಹಕ್ಕು ಕರ್ತವ್ಯ ಶಕ್ತಿ

ಸಾಮರ್ಥ್ಯಗಳಿವೆ ಎಂದು ಸಾಧಿಸಿ ತೋರುತ್ತಿರುವ ಕಾಲ ಸ್ವಾತಂತ್ರ್ಯನಂತರದ ಕಾನೂನುಗಳು ಮತ್ತು ಶಿಕ್ಷಣದ ಪ್ರಭಾವದಿಂದ ಮಹಿಳೆ ಪರಂಪರಾಗತ ಸಂಕೋಲೆಗಳನ್ನು ಕಿತ್ತೊಗೆದಿದ್ದಾಳೆ. ವೃತ್ತಿಯನ್ನು ನಿರ್ವಹಿಸುತ್ತಾ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸಿದ್ದಾಳೆ. ಪರಾವಲಂಬನೆಯ ಸಂಕೋಲೆ ಕಿತ್ತೊಗೆದು ಸ್ವಾವಲಂಬಿಯಾಗಲು ಯತ್ನಿಸಿದ್ದಾಳೆ. ಅಧಿಕಾರದ ಚುಕ್ಕಾಣಿ ಹಿಡಿದಿದ್ದಾಳೆ. ಬದಲಾದ ಈ ಪರಿಸ್ಥಿತಿಯಲ್ಲಿ ಹೆಣ್ಣಿನ ಮನಸ್ಥಿತಿ ಹಾಗೂ ಅವಳ ಮುಂದಿರುವ ಸವಾಲುಗಳನ್ನು ಕಾದಂಬರಿಯಲ್ಲಿ ಚಿತ್ರಣಗೊಂಡ ಮಹಿಳಾ ಪಾತ್ರಗಳ ಮೂಲಕ ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಕಾದಂಬರಿಕಾರ್ತಿ ತಮ್ಮ ಜೀವನದಲ್ಲಿ ಏಳು-ಬೀಳುಗಳನ್ನು ತಮ್ಮ ಕೃತಿಗಳ ಮೂಲಕ ಪಡಿಮೂಡಿಸಿದ್ದಾರೆ. ಈ ಮೂಲಕ ಅವರ ಕೃತಿಗಳು ಸಾಹಿತ್ಯ ಕ್ಷೇತ್ರದಲ್ಲಿ ವಿಶೇಷತೆಯನ್ನು ಪಡೆದುಕೊಂಡಿವೆ. ಹಾಗೆಯೇ ಆಧುನಿಕ ಕನ್ನಡ ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ಅಪರಾವಾದದ್ದು ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಬಂದಂತಹ ಲೇಖಕಿಯರು ವಿಭಿನ್ನ ಕೃತಿ ರಚನೆಯಲ್ಲಿ ತೊಡಗಿದ್ದಾರೆ. ಅವರಲ್ಲಿ ಗೀತಾನಾಗಭೂಷಣ ಅವರ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಮಹಿಳಾ ಸಂವೇದನೆಯ ನೆಲೆಗಳನ್ನು ಪತ್ತೆ ಹಚ್ಚುವ ಮುಖ್ಯ ಉದ್ದೇಶವನ್ನು ಈ ಅಧ್ಯಯನವು ಒಳಗೊಂಡಿದೆ. ಗೀತಾರವರು ಸ್ವತಃ ತಾವೇ ಅನುಭವಿಸಿರುವ ನೋವುಗಳನ್ನು ತಾವೇ ಕಂಡಿರುವ ಮೌಢ್ಯ ಆಚರಣೆಗಳನ್ನು ಕೆಳವರ್ಗದ ಮತ್ತು ಕೊಳಗೇರಿ ಝೋಪಡಿ ಮಹಿಳೆಯರು ಅನುಭವಿಸುತ್ತಿರುವ ನೋವುಗಳನ್ನು ತಮ್ಮದೇ ಆದ ಜವಾರಿ ಭಾಷೆಯಲ್ಲಿ ವಿಶ್ಲೇಷಿಸಿರುವ ಅಂಶಗಳನ್ನು ಗುರುತಿಸುವ ಆಶಯವನ್ನು ಈ ಅಧ್ಯಯನ ಹೊಂದಿದೆ.

ಇವರ ಕಾದಂಬರಿಗಳಲ್ಲಿ ಮಹಿಳಾ ಸಾಹಿತ್ಯ ಪುರುಷ ಪ್ರಾಧಾನ್ಯದಿಂದಲೇ ಹೇಗೆ ನೋಡುತ್ತಿದೆ. ಸಮಾಜದ ದೃಷ್ಟಿಕೋನವೇ ಗೀತಾರವರ ದೃಷ್ಟಿಕೋನವಾಗಿದೆಯೇ ಭಾವುಕತೆಯೊಳಗೆ ಇರುವ ಕಾದಂಬರಿಗಳಲ್ಲಿ ಲೋಕ ನೋಡುವ ಕ್ರಮ ಯಾವುದು? ಇವರ ಕಾದಂಬರಿಗಳಲ್ಲಿ ದ್ವಂದ್ವ ಎಂಬುವುದಿದೆಯೇ ಭಾಷೆಯಲ್ಲಿ ಸಂಕೀರ್ಣತೆ ಇದೆಯೇ ಎಂಬ ಅಂಶಗಳನ್ನಿಟ್ಟುಕೊಂಡು ಎರಡು ಕಾದಂಬರಿಗಳ ವ್ಯಾಪ್ತಿಯೊಳಗೆ ಅಧ್ಯಯನ ಮಾಡುವ ಉದ್ದೇಶವನ್ನು ಈ ನಿಬಂಧ ಹೊಂದಿರುತ್ತದೆ. ಈ ಅಧ್ಯಯನದಲ್ಲಿ ಅವರ 'ಬದುಕು' ಮತ್ತು 'ಬಾಕಿ' ಕಾದಂಬರಿಗಳಲ್ಲಿ ವಿಶ್ಲೇಷಿಸಲು ಉದ್ದೇಶಿಸಲಾಗಿದೆ. ಗೀತಾ ಅವರ ಈ ಕಾದಂಬರಿಗಳು ದಲಿತ ಬಂಡಾಯ ಮತ್ತು 'ಸ್ತ್ರೀ-ವಾದಿ ಪ್ರಜ್ಞೆಯನ್ನು ಒಳಗೊಂಡಿವೆ. ಆದ್ದರಿಂದ 'ಸ್ತ್ರೀವಾದಿ ದೃಷ್ಟಿಕೋನವನ್ನು ಬಿಟ್ಟು ದಲಿತ ಬಂಡಾಯದ ಹಿನ್ನೆಲೆಯಲ್ಲಿ ದಲಿತ ಬಂಡಾಯವನ್ನು ಬಿಟ್ಟು, ಸ್ತ್ರೀ ವಾದಿ ಹಿನ್ನೆಲೆಯಲ್ಲಿ ನೋಡಲಾಗುವುದಿಲ್ಲ. ಏಕೆಂದರೆ ಈ ಎರಡು ಪ್ರಜ್ಞೆಗಳು ಸಹ ಒಂದರೊಳಗೊಂದು

ಸೇರಿ ಹೋಗಿವೆ. ಆದ್ದರಿಂದ ದಲಿತ ಬಂಡಾಯ ಮತ್ತು ಮಹಿಳಾ ಸಂವೇದನೆಯ ಪ್ರಜ್ಞೆಗಳನ್ನು ಈ ನಿಬಂಧದಲ್ಲಿ ಶೋಧಿಸಲಾಗಿದೆ. ಗೀತಾರವರ 'ಬದುಕು' ಮತ್ತು 'ಬಾಕಿ' ಕಾದಂಬರಿಗಳು ಪುರುಷ ಪ್ರಧಾನತೆಯುಲ್ಲಿನ ಶೋಷಣೆಗಳನ್ನು ಪ್ರತಿಭಟಿಸುತ್ತವೆಯಾದರೂ ಅವುಗಳಿಗೆ ಭಿನ್ನ ನೆಲೆಗಳಿವೆ ಎಂಬುದನ್ನು ತಿಳಿಯಲು ಎರಡು ಕಾದಂಬರಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಜೊತೆಗೆ 'ಬದುಕು' ಮತ್ತು 'ಬಾಕಿ' ಕಾದಂರಿಗಳಲ್ಲಿ ವ್ಯಕ್ತವಾಗುವ ಸಾಮಾಜಿಕ ವಿಷಯಗಳಿಗೆ ಮಾತ್ರ ಅಧ್ಯಯನವನ್ನು ಸೀಮಿತಗೊಳಿಸಿದೆ. ಅಲ್ಲದೇ ಗೀತಾರವರು ಸಮಕಾಲೀನ ಲೇಖಕಿಯರ ನಡುವೆ ಮಹಿಳಾ ಸಂವೇದನೆ ನೆಲೆಯಿಂದ ಹೇಗೆ ಅನನ್ಯರಾಗಿದ್ದಾರೆ ಎಂಬುದನ್ನು ಕಂಡುಕೊಳ್ಳಲು ಸಹ ಯತ್ನಿಸಲಾಗಿದೆ.

ಅಧ್ಯಾಯ ಒಂದರಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ಅಧ್ಯಯನದ ವಿಧಾನವನ್ನು ಕುರಿತು ವಿವರಿಸಿದ್ದೇನೆ. ವಿವರಣೆ, ವಿಶ್ಲೇಷಣೆ, ವಿಮರ್ಶೆ ಮತ್ತು ತೌಲನಿಕ ವಿವೇಚನೆಗಳನ್ನು ಒಳಗೊಂಡ ಅಧ್ಯಯನದ ವಿಧಾನವನ್ನು ಅಳವಡಿಸಲಾಗಿದ್ದು ಮತ್ತು ವಸ್ತು ಆಶಯಗಳಿಗನುಗುಣವಾಗಿ ಕಾದಂಬರಿಗಳನ್ನು ವರ್ಗೀಕರಣ ಮಾಡಿಕೊಂಡು ವಿಭಿನ್ನ ನೆಲೆಗಳಲ್ಲಿ ಸಮಕಾಲೀನ ಸಾಮಾಜಿಕ, ವೈಚಾರಿಕ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ವಿಶ್ಲೇಷಣೆಗೊಳಪಡಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ 'ಬದುಕು' ಕಾದಂಬರಿಯಲ್ಲಿ ವ್ಯಕ್ತವಾಗುವ ವಿಭಿನ್ನ ನೆಲೆಗಳನ್ನು ಗುರುತಿಸಲಾಗಿದೆ. ಅದರಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿನ ಕೆಳ ಸಮುದಾಯದ ಜೋಪಡಿ ಮಹಿಳೆಯರ ಬದುಕು ಬವಣೆ, ಶೋಷಣೆ, ನೋವು–ನಲಿವು, ಸುಖ ದುಃಖ ಹಾಗೂ ಸ್ತ್ರೀ ಸಂಘರ್ಷದ ನೆಲೆಗಳನ್ನು ಗುರುತಿಸುವ ಮೂಲಕ ಜಾತಿ, ವರ್ಗ ವಿರೋಧಿ ನೆಲೆಗಳ ಆಯಾಮಗಳ ಕುರಿತು ಚರ್ಚಿಸಲಾಗಿದೆ. ಅಲ್ಲದೇ ಉತ್ತರ ಕರ್ನಾಟಕದ ಭಾಗದಲ್ಲಿ ಕಂಡುಬರುವ ಜಮೀನ್ದಾರಿ ವ್ಯವಸ್ಥೆಯ ನೆಲೆಗಳು ಹಾಗೂ ಸ್ತ್ರೀ ವಿರೋಧಿ ನೆಲೆಗಳನ್ನು ಸಹ ಕುರಿತು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಅಧ್ಯಯನದ ಕೇಂದ್ರ ವ್ಯಕ್ತಿಯಾದ ಶಾಂತಿ ಸಾವಳಗಿ ಅವರ ಆತ್ಮಾವಲೋಕನ ಕುರಿತು ಚರ್ಚಿಸಲಾಗಿದ್ದು, ಕಾದಂಬರಿಯಲ್ಲಿ ಚಿತ್ರಿತವಾಗಿರುವ ಪಾತ್ರಗಳ ನಲೆಗಳಲ್ಲಿ ವ್ಯಕ್ತವಾಗಿರುವ ಪುರುಷ ವಿರೋಧಿ ನೆಲೆಗಳನ್ನು ಗುರುತಿಸುವ ಮೂಲಕ, ಮಹಿಳೆಯರ ಆರ್ಥಿಕ ವ್ಯವಸ್ಥೆಯ ಕುರಿತು ಚರ್ಚಿಸಲಾಗಿದೆ. ಅಲ್ಲದೇ ಕಾದಂಬರಿಯಲ್ಲಿ ಮೂಡಿಬಂದಿರುವ ಧಾರ್ಮಿಕ ಆಚರಣೆಯ ಮೌಢ್ಯಾಚರಣೆಗಳ ನೆಲೆಯಲ್ಲಿ ಮಹಿಳೆಯು ಹೇಗೆ ಬಂಧಿತಳಾಗಿದ್ದಾಳೆ ಎಂಬುದನ್ನು ಸಹ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಯನದಲ್ಲಿ ಮಹಿಳಾ ಸಂವೇದನೆಯ ತೌಲನಿಕ ವಿಶ್ಲೇಷಣೆ ಬದುಕು ಮತ್ತು ಬಾಕಿ ಕಾದಂಬರಿಗಳ ಕುರಿತು ಪ್ರತ್ಯೇಕ ಅಧ್ಯಯನಗಳು ನಡೆದಿದ್ದರೂ, ವಿಭಿನ್ನ ನೆಲೆಯಲ್ಲಿ ಕಾದಂಬರಿಗಳಲ್ಲಿನ ಸ್ತ್ರೀ ಪಾತ್ರಗಳ ತೌಲನಿಕ ಚಿಂತನೆ ಇನ್ನೂ ಆಗಿಲ್ಲ. ಈ ನಿಟ್ಟಿನಲ್ಲಿ ಕಾದಂಬರಿಗಳಲ್ಲಿ ಕಂಡುಬರುವ ವಸ್ತುಗಳ ಆಯ್ಕೆ, ಪ್ರೇಮ ನಿವೇದನೆ, ಬಡತನ, ಅಸ್ಪೃಶ್ಯತೆ, ಮೂಢನಂಬಿಕೆಗಳು, ಜಾತಿವ್ಯವಸ್ಥೆ ಹಾಗೂ ಮಹಿಳಾ ಶೋಷಣೆ ಹೀಗೆ ಇನ್ನೂ ಅನೇಕ ವಾಸ್ತವಿಕ ಅಂಶಗಳನ್ನು ವಾಸ್ತವಿಕ ನೆಲೆಗಟ್ಟಿನ ಮೇಲೆ, ಉತ್ತರ ಕರ್ನಾಟಕದ ತಳಸಮುದಾಯದ ಮಹಿಳೆಯರು ಅನುಭವಿಸಿರುವ ನೈಜ ಚಿತ್ರಣವನ್ನು, ಮಹಿಳಾ ಸಂವೇದನೆಯ ನೆಲೆಗಳನ್ನು ತೌಲನಿಕವಾಗಿ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿ ಕಂಡುಬರುವ ಕೆಳ ಸಮುದಾಯದ ಮಹಿಳೆಯರು ಅನುಭವಿಸುತ್ತಿರುವ ಮಹಿಳಾ ಸಂವೇದನೆಯ ಆಯಾಮಗಳನ್ನು ಗುರುತಿಸುವ ಮೂಲಕ, ಕಾದಂಬರಿಗಳಲ್ಲಿ ಅಭಿವ್ಯಕ್ತಗೊಂಡಿರುವ ಸಾಮಾಜಿಕ ಸಮಸ್ಯೆಗಳು, ಅಸಮಾನತೆ, ಮೂಢನಂಬಿಕೆ, ಅಸ್ಪೃಶ್ಯತೆ ಮೇಲು ಕೀಳು ಎಂಬ ಭಾವನೆ, ಅನಿಷ್ಟ ಪದ್ಧತಿಗಳಲ್ಲಿ ಮಹಿಳೆಯರು ಅನುಭವಿಸುತ್ತಿರುವ ನೋವು, ಸಂಕಟ, ಬದುಕು, ಬವಣೆ, ಹಾಗೂ ಶೋಷಣೆಗಳ ಕುರಿತಾದ ವಿವಿಧ ಆಯಾಮಗಳ ಸಂವೇದನೆಗಳು ಹೇಗೆ ಕೆಳವರ್ಗದ ಜನರನ್ನು ಹಿಂದುಳಿಸಿದೆ? ಕಾರಣಗಳೇನು? ಏನೆಲ್ಲಾ ಸಮಸ್ಯೆಗಳು ಅವರಲ್ಲಿ ಕಂಡುಬರುತ್ತವೆ. ಎಂಬುದುನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ ಆರರ ಸಮಾರೋಪದಲ್ಲಿ ಒಟ್ಟಾರೆ ಅಧ್ಯಯನದ ಫಲಿತಗಳು ಹಾಗೂ ಮುಂದಿನ ಅಧ್ಯಯನದ ಸಾಧ್ಯತೆಗಳನ್ನು ನಿರೂಪಿಸಲಾಗಿದೆ. ಅನುಬಂಧದಲ್ಲಿ ವ್ಯಕ್ತಿ ಪರಿಚಯ, ಒಟ್ಟು ಸಾಹಿತ್ಯ ಕೃತಿಗಳು, ಪ್ರಶಸ್ತಿಗಳು ಹಾಗೂ ಅಧ್ಯಯನಕ್ಕೆ ಸಹಾಯಕವಾಗಿರುವ ಗ್ರಂಥಗಳನ್ನು ಹೆಸರಿಸಲಾಗಿದೆ.

### ೧.೨. ಅಧ್ಯಯನದ ವೈಧಾನಿಕತೆ

ಗೀತಾನಾಗಭೂಷಣ ಅವರು ತಮ್ಮ ಕಾದಂಬರಿಗಳಲ್ಲಿ 'ಉತ್ತರ ಕರ್ನಾಟಕದ ಆಡು ಭಾಷೆಯನ್ನೇ ಬಳಸಿದ್ದಾರೆ. ಅವರ ಕಾದಂಬರಿಗಳೇ ಮುಖ್ಯ ಪ್ರೇರಣೆಯಾಗಿದ್ದು ಅವರ ವೈಯಕ್ತಿಕ ಬದುಕು ಕಥನತಂತ್ರ, ನಿರೂಪಣಾ ವಿಧಾನ, ಅವರು ಕೆಳವರ್ಗದ ಸಮಾಜವನ್ನೇ ಸಾಹಿತ್ಯದ ವಸ್ತು, ವರ್ಣನೆ, ನುಡಿಗಟ್ಟು, ಗಾದೆಗಳು, ಜಾನಪದೀಯ ಉಪಮೇಯಗಳು ಹೆಣ್ಣಿನ ಕುರಿತು ಮಾತುಗಳು ಭಾಷೆಗಳ ಮೂಲಕ ಹೆಣ್ಣು ಮತ್ತು ಗಂಡಿನ ಬಗ್ಗೆ ಇರುವಂತಹ ನೋಟಕ್ರಮ, ವ್ಯವಸ್ಥೆಯನ್ನು ಒಪ್ಪಿ ನಡೆಯುವಂತಹ

ವಿರೋಧಿಸುವಂತಹ ಹಿಂಸೆ ಪಡುವಂತಹ ಹಾಗೂ ವಿಭಿನ್ನ ಸಂಬಂಧಗಳ ಸ್ವರೂಪಗಳನ್ನು ತಿಳಿಯುವ ಪ್ರಯತ್ನವನ್ನು ವಿವರಣೆ, ವಿಶ್ಲೇಷಣೆ ಹಾಗೂ ತೌಲನಿಕ ವಿವೇಚನೆಗಳನ್ನು ಒಳಗೊಂಡ ಅಧ್ಯಯನದ ವಿಧಾನಗಳನ್ನಾಗಿ ಅಳವಡಿಸಿಕೊಳ್ಳಲಾಗಿದೆ.

ಅಲ್ಲದೇ, ಇವರ ಕಾದಂಬರಿಗಳಲ್ಲಿ ಮಹಿಳಾ ಸಾಹಿತ್ಯ ಪುರುಷ ಪ್ರಧಾನದಿಂದಲೇ ನೋಡುವ ಕ್ರಮದಿಂದ ಗೀತಾರವರು ಲೋಕ ನೋಡುವ ಕ್ರಮವನ್ನು ಇವರ ಕಾದಂಬರಿಗಳಲ್ಲಿ ವರ್ಣಿಸಲಾಗಿದೆ. 'ಮಹಿಳಾ ಸಂವೇದನೆಯನ್ನು ಅಭಿವ್ಯಕ್ತಿಗೊಳಿಸಿದ ಬಗೆಯನ್ನು 'ಬದುಕು ಮತ್ತು ಬಾಕಿ' ಕಾದಂಬರಿಗಳನ್ನು ಅಧ್ಯಯನ ಮಾಡುವ ಮೂಲಕ ಕಂಡುಕೊಳ್ಳಲಾಗಿದೆ. ಮಹಿಳಾ ಸಂವೇದನೆಯ ಆಶಯಗಳನ್ನು ವಿಶ್ಲೇಷಣಾತ್ಮಕ, ತೌಲನಿಕ ವಿಧಾನಗಳನ್ನು ಅಳವಡಿಸಿಕೊಳ್ಳುವ ಮೂಲಕ ವಿಸ್ತರಿಸಲಾಗಿದೆ.

**೧.೩. ಅಧ್ಯಯನದ ಮಹತ್ವ**

ಉತ್ತರ ಕರ್ನಾಟಕದ ಸಾಮಾಜಿಕ ವ್ಯವಸ್ಥೆಯು ಸಂಪೂರ್ಣವಾಗಿ ಪುರುಷ ಪ್ರಧಾನವಾಗಿದ್ದು ಇಂದಿಗೂ ಸ್ವಲ್ಪವು ಅಲುಗದ ಸ್ಥಿತಿಯಲ್ಲಿದೆ. ಇದರೊಂದಿಗೆ ಅನಕ್ಷರತೆ, ಮೂಢನಂಬಿಕೆ, ಬಡತನ ಹಾಗೂ ಶ್ರೇಣೀಕರಣಗಳು ಸೇರಿಕೊಂಡು ಇನ್ನೂ ಭೀಕರವಾಗಿ ಗಟ್ಟಿಗೊಳ್ಳುತ್ತದೆ. ನಗರ ಪ್ರದೇಶದ ಚಹರೆಗಳು ಸ್ವಲ್ಪ ಮಟ್ಟಿಗೆ ಬದಲಾಗುತ್ತಿರುವುದು ಕಂಡುಬರುತ್ತದೆ. ೧೨ನೇ ಶತಮಾನದ ವಚನ ಚಳುವಳಿಯ ಸಂದರ್ಭದಲ್ಲಿ ಸಮಾನ ನೆಲೆಯ ಸ್ಥಾನಮಾನವನ್ನು ಪಡೆದಿದ್ದ ಈ ಪ್ರದೇಶ ಮಹಿಳೆ ನಂತರದ ರಾಜಕೀಯ ಸ್ಥಿತ್ಯಂತರಗಳ ಪ್ರಭಾವದಲ್ಲಿ ಅಧೀನ ಸ್ಥಿತಿಗೆ ತಳ್ಳಲ್ಪಟ್ಟು ಅವಕಾಶ ವಂಚಿತಳಾದದ್ದು, ಮಾತ್ರವಲ್ಲ, ಅನಿಷ್ಟ ಸಂಪ್ರದಾಯ ಆಚರಣೆಗೆ ಸಿಕ್ಕಿ ನರಳುತ್ತಿದ್ದಾಳೆ. ಮೇಲ್ವರ್ಗದ ಮಹಿಳೆ ರಕ್ಷಣೆಯ ನೆಪದಲ್ಲಿ ಗೃಹ ಬಂಧಿಯಾದರೆ ಕೆಳವರ್ಗದ ಮಹಿಳೆಗೆ ರಕ್ಷಣೆಯೆ ಇಲ್ಲವಾಗಿದೆ. ಇಂತಹ ವ್ಯವಸ್ಥೆಯಲ್ಲಿ ಮಹಿಳೆ ಯಾವ ರೀತಿಯ ನೋವು ಸಂಕಷ್ಟಗಳನ್ನು ಮತ್ತು ಅವಮಾನ ಅಪಮಾನಗಳನ್ನು ಅನುಭವಿಸುತ್ತಾಳೆ ಎನ್ನುವುದನ್ನು ಸ್ವತಃ ದಲಿತ ಬಂಡಾಯ ಲೇಖಕಿಯಾದ ಮತ್ತು ಅಂತಹ ನೋವು ಸಂಕಟಗಳನ್ನು ಅನುಭವಿಸುತ್ತಾ ಮೇಲೆ ಬಂದಿರುವ ಇವರು ಹಲವು ಕಾದಂಬರಿಗಳು ಮಹಿಳಾ ಸಂವೇದನೆಯ ನೆಲೆಗಳನ್ನು ಹೇಳುತ್ತವೆ. ಅದರಲ್ಲೂ ವಿಶೇಷವಾಗಿ 'ಬದುಕು ಮತ್ತು ಬಾಕಿ' ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಮಹಿಳಾ ಸಂವೇದನೆಯ ಕುರಿತು ಅಧ್ಯಯನ ಮಾಡುವಲ್ಲಿ ಈ ಅಧ್ಯಯನ ಮಹತ್ವ ಪಡೆದುಕೊಂಡಿರುವುದನ್ನು ಕಾಣಬಹುದು. ಅಲ್ಲದೆ 'ಹೊಸ ಗನ್ನಡ ಸಾಹಿತ್ಯ ಸಂದರ್ಭದಲ್ಲಿ ಪಾಶ್ಚ್ಯಾತ್ಯ ಪ್ರಭಾವದಿಂದ ಸಣ್ಣಕತೆ, ನಾಟಕ, ಕಾವ್ಯ, ಪ್ರಬಂಧ, ವಿಮರ್ಶೆ, ಮಕ್ಕಳ ಸಾಹಿತ್ಯ ಅನುವಾದ ಮುಂತಾದ ಪ್ರಕಾರಗಳು ಭರದಿಂದ ಸಾಗಲು ಆರಂಭವಾಯಿತು. ಈ ಸಂದರ್ಭದಲ್ಲಿ ಕಾದಂಬರಿ ಪ್ರಕಾರವು ತುಂಬಾ ಪ್ರಭಾವ

ಪೂರ್ಣವಾಗಿ ಹೊರಹೊಮ್ಮಿ ಬಹುಜನರನ್ನು ಆಕರ್ಷಿಸಿತು. ಈ ನಿಟ್ಟಿನಲ್ಲಿ ಸಮಾಜದ ತುಳಿತಕ್ಕೆ ಒಳಪಟ್ಟವರೆಂದು ಪರಿಗಣಿಸಿರುವ ವರ್ಗದಲ್ಲಿ ಹುಟ್ಟಿ ಅನೇಕ ಕಷ್ಟ ಕಾರ್ಪಣ್ಯಗಳ ನಡುವೆ ಬೆಳೆದ ಲೇಖಕಿ ಭಿನ್ನ ನೆಲೆಗಳಲ್ಲಿ ನಿಂತು ಸಮಾಜದ ಎಲ್ಲಾ ಮುಖಗಳನ್ನು ದರ್ಶಿಸುವ ಕಾದಂಬರಿಗಳನ್ನು ಬರೆದಿದ್ದಾರೆ.

ಅನುಭವಗಳ ಪರಿಕಪಕ್ವ ಪಾಕದಂತಿರುವ 'ಬದುಕು ಮತ್ತು ಬಾಕಿ' ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಿ ವಿಶ್ಲೇಷಣೆಯ ಮೂಲಕ ಕಾದಂಬರಿಯಲ್ಲಿಯ ಹೆಣ್ಣಿನ ನೈಜತೆ ಮತ್ತು ಮಹಿಳೆಯರ ಸಾಮಾಜಿಕ ಕಳಕಳಿಯನ್ನು ಹೊರಗೆಳೆದು ತೋರುವ ಅಗತ್ಯವಿದೆ. ಮಹಿಳೆಯ ಶೋಷಣೆಯ ನೆಲೆಗಳನ್ನು ಇವರ ಈ ಎರಡು ಕಾದಂಬರಿಗಳಲ್ಲಿ ತಿಳಿಯಬಹುದು. ಶೋಷಣೆಯನ್ನು ಚಿತ್ರಿಸುವುದರ ಜೊತೆಗೆ ಅದರ ವಿರುದ್ಧ ಪ್ರತಿಭಟನೆಯ ಧ್ವನಿಗಳನ್ನು ಹಾಗೂ ಬಂಡಾಯವನ್ನು ಚಿತ್ರಿಸಿ ಸಮಾಜದ ಪ್ರತಿಯೊಬ್ಬ ವ್ಯಕ್ತಿಯನ್ನು ಎಚ್ಚರಿಸಿ ಪ್ರಜ್ಞಾ ಸ್ಥಿತಿಗೆ ತಂದು ಯೋಚನೆಯ ಆಳಕ್ಕೆ ನೂಕುವ ವಿಶಿಷ್ಟ ಕಾದಂಬರಿಗಳಿವು. ಕಾದಂಬರಿಗಳಲ್ಲಿ ಸ್ತ್ರೀ ಪಾತ್ರವನ್ನು ಕೇಂದ್ರಬಿಂದುವಾಗಿ ಮಾಡುವ ಗೀತಾರವರು ಮೂಲತಃ ಕೊಳಗೇರಿಗಳ ಮತ್ತು ಹಳ್ಳಿಯ ಜೋಪಡಿ ಪಟ್ಟಿಗಳ ಸ್ತ್ರೀಯರನ್ನು ಬಹಳ ಹತ್ತಿರದಿಂದ ಬಲ್ಲವರಾಗಿದ್ದಾರೆ. ಆದ್ದರಿಂದ ಅವರು ಕಾದಂಬರಿಗಳಲ್ಲಿ ಹೆಣ್ಣನ್ನು ಮಾನಸಿಕವಾಗಿ ಹಾಗೂ ದೈಹಿಕವಾಗಿ ಶೋಷಣೆಗೆ ಒಳಪಡುವ ವಿವಿಧ ರೀತಿಗಳನ್ನು ತಮ್ಮ ಕೃತಿಗಳಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ಮೂಲಕ ಸಾಮಾಜಿಕ ಕಳಕಳಿಯ ಪ್ರಾಮುಖ್ಯತೆಯನ್ನು ತೋರಿಸಿದ್ದಾರೆ.

# ಅಧ್ಯಾಯ ಎರಡು

# ಬದುಕು ಕಾದಂಬರಿಯಲ್ಲಿ ಮಹಿಳಾ ಸಂವೇದನೆ

## ಪೀಠಿಕೆ

'ಬದುಕು' ಕನ್ನಡ ಕಾದಂಬರಿ ಸಾಹಿತ್ಯದಲ್ಲಿ ಒಂದು ಮಹತ್ವದ ಕೃತಿ. ಇದು ಒಂದು ಸಾಂಸ್ಕೃತಿಕ ಮತ್ತು ಜನ ಜೀವನವನ್ನು ಪ್ರತಿಬಿಂಬಿಸುತ್ತದೆ. ಇದರಲ್ಲಿ ಉತ್ತರ ಕರ್ನಾಟಕದ ಅಲಕ್ಷಿತ ಸಮುದಾಯವೊಂದರ ಬದುಕಿನ ಜೀವನಾಡಿಯನ್ನು ವಿಶಿಷ್ಟ ಭಾಷೆಯಲ್ಲಿ ಚಿತ್ರಿಸಲಾಗಿದೆ. 'ಬದುಕು' ಕಾದಂಬರಿಯು ಕೇವಲ ಕತೆಯಲ್ಲ. ಕೊಳಗೇರಿ ಮತ್ತು ಕೆಳಗೇರಿಯ ಝೋಪಡಿ ಜನರ ನೋವು ನಲಿವುಗಳನ್ನು ಕಾದಂಬರಿಗಾರ್ತಿಯು ಕಣ್ಣಾರೆ ಕಂಡ, ನೇರವಾಗಿ ಅನುಭವಿಸಿದ ವಾಸ್ತವಗಳ ಸಂಗಮವಾಗಿದ್ದು, ಕಾದಂಬರಿಯಲ್ಲಿ ಕೆಳವರ್ಗದ, ದಲಿತ, ಮಹಿಳೆಯರ, ಕೆಳಗೇರಿ ಮತ್ತು ಕೊಳಗೇರಿ ಹೆಣ್ಣುಮಕ್ಕಳ ನೋವುಗಳನ್ನು ಮತ್ತು ಶೋಷಣೆಗಳನ್ನು ಹೆಣೆಯುವ ಮೂಲಕ 'ಸ್ತ್ರೀ'ಯರ ಬದುಕಿನ ಸಂವೇದನೆಗಳನ್ನು ಹುಡುಕಲು ಯತ್ನಿಸಲಾಗಿದೆ. ಅವರ ಬದುಕಿನ ಸಂವೇದನೆಗಳನ್ನು ಹಳ್ಳಿಯ ಸೊಗಸನ್ನು ಕೆಳಗೇರಿ, ದಲಿತರ, ಝೋಪಡಿ ಮಂದಿಯ ಸಜ್ಜಿರೊಟ್ಟಿ, ಬಜ್ಜಿಪಲ್ಯ, ಜ್ವಾಳದ ಕಡಬು, ಪುಂಡಿಪಲ್ಯ ಇಂತಹ ಆಹಾರ ಸಂಸ್ಕೃತಿಯನ್ನು ಕಾದಂಬರಿಯಲ್ಲಿ ವಿವರಿಸುವುದರ ಜೊತೆಗೆ ಇಡೀ ಉತ್ತರ ಕರ್ನಾಟಕ ಭಾಗದ ಜನರ ಕಾಮ, ಕುಡಿತ, ಹಸಿವು ಇವು ಮೂರು ಜನರ ಬದುಕಿನ ಅವಿಭಾಜ್ಯ ಅಂಗಗಳಾಗಿದ್ದವು ಅಲ್ಲದೇ ಮಹಿಳೆಯರ ಸಣ್ಣ ಸಣ್ಣ ಆಸೆಗಳನ್ನು ಮತ್ತು ಬಯಕೆಗಳನ್ನು ಬಹಳ ಸೂಕ್ಷ್ಮವಾಗಿ ಉತ್ತರ ಕರ್ನಾಟಕದ ಜನರ-ಜೀವನವನ್ನು ಕಥೆಯಾಗಿಸಿದ್ದಾರೆ. 'ಬದುಕು' ಕಾದಂಬರಿಯಲ್ಲಿ ಶಿವಳ್ಳಿ ಗ್ರಾಮದ ಜಮದಾರ ಮಲ್ಲಪ್ಪ ಕೆಳಗೇರಿಯ ಹಿರಿಯ, ಇವನ ಕುಟುಂಬದ ಕತೆಯಾಗಿ ಈ ಕಾದಂಬರಿ ಬಿಚ್ಚಿಕೊಂಡರೂ ಇವನ ಕುಟುಂಬದಾಚೆಗೆ ಹತ್ತು ಹಲವಾರು ಪಾತ್ರಗಳು, ಕಥೆಗಳು, ಉಪಕಥೆಗಳು ಸುರಳಿಯಂತೆ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಈ ಹಿನ್ನೆಲೆಯಲ್ಲಿ ಬದುಕು 'ಕಾದಂಬರಿ'ಯಲ್ಲಿ ಮಹಿಳಾ ಸಂವೇದನೆಯ ನೆಲೆಗಳನ್ನು ಈ ಕೆಳಕಂಡ ಅಂಶಗಳ ಮೂಲಕ ಕಾಣಬಹುದು.

೧. 'ಮಹಿಳಾ' ಸಂಘರ್ಷದ ನೆಲೆಗಳು

೨. ಜಾತಿ ಮತ್ತು ವರ್ಗ ವಿರೋಧಿ ನೆಲೆಗಳು

೩. ಜಮೀನ್ದಾರಿ ನೆಲೆಗಳು

೪. 'ಮಹಿಳಾ' ವಿರೋಧಿ ನೆಲೆಗಳು

೧. **'ಮಹಿಳಾ' ಸಂಘರ್ಷದ ನೆಲೆಗಳು** : ಮನುಷ್ಯನು ಸಮಾಜ ಜೀವಿ, ಹಾಗೆಯೇ ಸಂಘ ಜೀವಿಯು ಆಗಿದ್ದಾನೆ. ಮನುಷ್ಯನು ಸಾಮಾಜಿಕ ವ್ಯವಸ್ಥೆಗಳಿಂದ ರೂಪಗೊಂಡವನಾಗಿದ್ದಾನೆ. ಅದರಲ್ಲಿ ವಿವಾಹ, ಕುಟುಂಬ, ರಾಜ್ಯ, ಮತ-ಧರ್ಮ, ಕಾನೂನು ಮುಂತಾದ ವ್ಯವಸ್ಥೆಗಳು ಮನುಷ್ಯ-ಮನುಷ್ಯರ ನಡುವೆ ವೈವಿಧ್ಯಮಯ ಸಂಬಂಧಗಳನ್ನು ಹಾಕಿದವು. ಈ ಸಂಬಂಧಗಳ ವಿನ್ಯಾಸವು ಕೂಡ ವೈವಿಧ್ಯಮಯವಾಗಿವೆ. ಈ ಸಂಬಂಧಗಳ ಸಂಕೀರ್ಣ ಹೆಣೆಗೆಯೊಳಗೆ ಒಬ್ಬರನ್ನೊಬ್ಬರು ನಿಯಂತ್ರಿಸತೊಡಗಿದಾಗ ಪ್ರಧಾನ ಹಾಗೂ ಅಧೀನತೆಯ ಕಲ್ಪನೆಗಳು ಬೆಳೆದು ಅಲ್ಲಿ ಅಸಮಾನತೆ ಉಂಟಾಗುತ್ತದೆ. ಆ ಅಸಮಾನತೆಯೇ ದಮನ ಮತ್ತು ಪ್ರತಿಭಟನೆಗೆ ಕಾರಣವಾಗುತ್ತದೆ. ಅನಾದಿ ಕಾಲದಿಂದಲೂ ಸಮಾಜ ವ್ಯವಸ್ಥೆಯಲ್ಲಿ ಅಸಮಾನತೆ, ವರ್ಗ, ವರ್ಣ, ವೈಷಮ್ಯತೆ, ಲಿಂಗ ತಾರತಮ್ಯತೆ, ಧೋರಣೆ ಹೀಗೆ ಅನೇಕ ಸಮಸ್ಯೆಗಳನ್ನು ಶತ-ಶತಮಾನಗಳಿಂದಲೂ ಬಡವರನ್ನು ಕೂಲಿಕಾರರನ್ನು 'ಸ್ತ್ರೀ'ಯರನ್ನು ಹತ್ತಿಕ್ಕುತ್ತಾ ಬಂದಿವೆ. ಹಿಂದಿನ ಕಾಲದಿಂದಲೂ ಮಹಿಳೆಯ ಅಸ್ತಿತ್ವವನ್ನು ನಿರಾಕರಿಸುತ್ತಾ ಅದಕ್ಕೆ ಸಮನಾಂತರವಾಗಿ ಮತ್ತೊಂದು ನೆಲೆಯಲ್ಲಿ ಅವಳನ್ನು ಆದರ್ಶೀಕರಿಸಿ 'ಸ್ತ್ರೀ' ಮಾದರಿಗಳನ್ನು ಸೃಷ್ಟಿಸುತ್ತಾ ಅದನ್ನೇ ಸಹಜವೆಂದು ನಂಬಿಸುತ್ತಾ ಬಂದ ಸಂಸ್ಕೃತಿ ಅವಳನ್ನು ವಿಸ್ಮೃತಿಯಲ್ಲಿ ಉಳಿಸಿದೆ. ಶ್ರೀಮಂತರ ದಬ್ಬಾಳಿಕೆಯ ವಿರುದ್ಧ ಪುರೋಹಿತ ಶಾಹಿಗಳ ಕಂದಚಾರದ ವಿರುದ್ಧ ಸ್ತ್ರೀಯರ ಶೀಲ ರಕ್ಷಣೆಗಾಗಿ ದುಷ್ಟಶಕ್ತಿಗಳ ವಿರುದ್ಧ ಸಮರ ಸಾರಬೇಕಿದೆ. ತಲ ತಲಾಂತರದಿಂದಲೂ ದಮನಕ್ಕೆ ಒಳಗಾಗುತ್ತಲೇ ಸದಾ ಹಸಿವು, ಅವಮಾನ, ನಿಂದನೆಗಳಲ್ಲಿಯೇ ಬದುಕು ಸಾಗಿಸುವ ಶೋಷಿತ ಜನರು ಅದುಮಿಟ್ಟುಕೊಂಡಿದ್ದ ಭಾವನೆಗಳು ಅಭಿವ್ಯಕ್ತಿ ಪಡೆಯುವಾಗ ಸಹಜವಾಗಿ ಅವು ಸ್ಫೋಟ ಗುಣವನ್ನು ಪಡೆಯುತ್ತವೆ.

ಮನುಷ್ಯ ತನ್ನ ಬದುಕಿನುದ್ದಕ್ಕೂ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡುತ್ತಲೇ ಇರುತ್ತಾನೆ. ಇಲ್ಲಿ ಅಸ್ತಿತ್ವ ಬರೀ ಇರುವಿಕೆ ಅಲ್ಲ ಅದು ಆಕೆಯ ಮಾನಸಿಕ ಅಸ್ತಿತ್ವದ ಸ್ವಾಭಿಮಾನದ ಕರ್ತವ್ಯ ಶಕ್ತಿಯ ಉಳಿವು ಆಗಿರಬಹುದು. ಪ್ರತಿಕೂಲ ಪರಿಸ್ಥಿತಿಯಲ್ಲಿ ಇಂಥ ಉಳಿವಿಗೆ ಧಕ್ಕೆಯಾದಾಗ ಆ ಪರಿಸ್ಥಿತಿಗೆ ಕಾರಣವಾದ ವ್ಯಕ್ತಿ ಮೌಲ್ಯ ವ್ಯವಸ್ಥೆಗಳನ್ನು ಪ್ರತಿಭಟಿಸುವುದು ಸಹಜ ಮತ್ತು ಅನಿವಾರ್ಯವಾಗಿರುತ್ತದೆ.

ಸಂಘರ್ಷದ ಅಭಿವ್ಯಕ್ತಿ ಹಲವು ವಿಧದಲ್ಲಿ ಸಾಧ್ಯವಾಗುತ್ತದೆ. ಅದು ವ್ಯಕ್ತಿಯ ವಿರುದ್ಧ ನೇರ ಮುಖಾಮುಖಿಯಾಗಿರಬಹುದು ಇಲ್ಲವೇ ಸ್ಥಾಪಿತ ಮೌಲ್ಯಗಳನ್ನು ನಿರಾಕರಿಸುವುದಾಗಿರಬಹುದು ಅಥವಾ ವ್ಯವಸ್ಥೆಯನ್ನೆ ಧಿಕ್ಕರಿಸುವಲ್ಲಿರಬಹುದು. ವ್ಯವಸ್ಥೆಯ ಕರಾಳತೆಯ ಅರಿವಿನಲ್ಲಿ ಅದರ ಬಿಗಿಮುಷ್ಟಿಯಿಂದ ಪಾರಾಗಲಾರದ ವಾಸ್ತವದಲ್ಲಿ ಪ್ರತಿಭಟನೆ ಪ್ರತಿಭಟನೆಯಲ್ಲಿಯೇ ಕೊನೆಯಾಗುವ ಸೋಲಿನಲ್ಲೇ ಕೊನೆಯಾಗುವ ಮಾದರಿಗಳು ಇವೆ. ಹಾಗೆಯೇ ಪ್ರತಿಭಟನೆಯ ಶೋಷಣೆ ಪರಂಪರೆಯನ್ನು ಮುರಿದು ಪರ್ಯಾಯ ಸಾಧ್ಯತೆಗಳತ್ತ ಬೆರಳು ಮಾಡುವ ಆಶಾವಾದಿ ರಚನೆಗಳಿವೆ. ಆದರೆ ಈ ಪ್ರತಿಭಟನೆಗಳು ಹೊಂದಿರುವ ಶೋಷಿತ ಸ್ಥಿತಿಯ ಅರಿವು ಜಾಗೃತಗೊಡ 'ಸ್ವ'ಪ್ರಜ್ಞೆ ಸ್ವಾಭಿಮಾನಗಳ ಸಂಕೇತ ವ್ಯವಸ್ಥೆಯನ್ನು ಮುರಿದು ಕಟ್ಟುವ ಮೂಲಕ ಬದಲಾವಣೆಯನ್ನು ಕಾಣಬಯಸುವ ಆಶಾವಾದದ ಬೀಜ ಅಂಕುರಿಸುತ್ತದೆ. ಕನ್ನಡ ಸಾಹಿತ್ಯದಲ್ಲಿ ರಚನೆಗೊಂಡ ಮಹಿಳಾ ಸಾಹಿತ್ಯಿಕ ಸಂದರ್ಭದಲ್ಲಿ ಅದರಲ್ಲೂ ಕತೆ, ಕಾದಂಬರಿಗಳ ರಚನೆಯಲ್ಲೂ ಪ್ರಕಟವಾದ ಪ್ರತಿಭಟನೆಯ ಧೋರಣೆಗಳನ್ನು ದಮನಕ್ಕೊಳಗಾಗುವ ಹೆಣ್ಣಿನ ಚಿತ್ರಗಳನ್ನು ಕೊಡುತ್ತಾ ಅವರ ಅಸಾಹಯಕತೆಗಳಿಸಿಕೊಂಡ ಎಚ್ಚರ ಹಾಗೂ ಪ್ರತಿಭಟನೆಯ ಮೂಲಕ ದಮನಿತ ಸ್ಥಿತಿಯನ್ನು ಮೀರುವ ಪ್ರಯತ್ನಗಳನ್ನು ಇಲ್ಲಿ ಕಾಣಬಹುದು. ಭಾಷಿಕ ನೆಲೆಯಲ್ಲಿ ಸಹ ರೋಷ ಆಕ್ರೋಶಗಳ ನೇರ ಅಭಿವ್ಯಕ್ತಿ ಇರುವುದರಿಂದ ತೀಕ್ಷ್ಣವಾದ ವ್ಯಂಗ್ಯ ವಿಡಂಬನೆಯ ಮೂಲಕ ಸಾಂಕೇತಿಕತೆಯ ಮೂಲಕ ಸೂಚ್ಯವಾಗಿ ಪ್ರಕಟಣೆಗೊಳ್ಳುವ ಪ್ರತಿಭಟನೆಯ (ಸಂಘರ್ಷದ) ಧ್ವನಿಗಳನ್ನು ಗಮನಿಸಬಹುದು.

ಸಮಾಜದಲ್ಲಿನ ಪುರುಷ ಪ್ರದಾನ ವ್ಯವಸ್ಥೆಯು ಹೆಣ್ಣಿನ ದೇಹ ಮತ್ತು ಮನಸ್ಸುಗಳ ಮೇಲಿನ ಸ್ವಾಮ್ಯವನ್ನು ಕಸಿದುಕೊಳ್ಳುವ ಮೂಲಕ ಅವಳನ್ನು ಸದಾ ಭಯ ಮತ್ತು ದಾಸ್ಯದ ಸ್ಥಿತಿಯಲ್ಲಿಯೇ ಉಳಿಸುತ್ತದೆ. ಅವಳ ಲೈಂಗಿಕತೆಯ ಮೇಲಿನ ನಿರ್ಬಂಧ ಮತ್ತು ಲೈಂಗಿಕ ಅಕ್ರಮಗಳು ಪರಸ್ಪರ ವಿರುದ್ಧ ಗತಿಯಲ್ಲಿ ಚಲಿಸಿ ಅವಳನ್ನು ದಿಗ್ಭ್ರಮೆಗೆ ತಳ್ಳುತ್ತವೆ. ಲೈಂಗಿಕತೆಯ ಮೂಲಕ ಅವಳ ಜೈವಿಕತೆಯೇ ಅವಳನ್ನು ಶೋಷಿಸಲು ಅಸ್ತ್ರವಾಗುತ್ತದೆ. ಶೀಲದ ಕಲ್ಪನೆಯನ್ನು ಬಿತ್ತಿ ಆಕೆ ತನ್ನ ದೇಹದ ಬಗೆಗಿನ ಪಾಪಪ್ರಜ್ಞೆಯಿಂದ ನರಳುವಂತೆ ಮಾಡುವಲ್ಲಿ ಸಂಸ್ಕೃತೀಕರಣ ಮಹತ್ತರ ಪಾತ್ರವಹಿಸುತ್ತದೆ. ಅತ್ಯಾಚಾರಕ್ಕೊಳಗಾದ ಹೆಣ್ಣಿನ ಮಾನಸಿಕ ಲೋಕವು ಛಿದ್ರಗೊಳ್ಳುವುದು. ಈ ಹಿನ್ನೆಲೆಯಲ್ಲಿಯೇ ಆಗಿದೆ. ಹೆಣ್ಣಿನ ಲೈಂಗಿಕತೆ ಮತ್ತು ಪವಿತ್ರವಾದ ತಾಯ್ತನಗಳನ್ನು ವೈವಾಹಿಕ ಚೌಕಟ್ಟಿನಲ್ಲಿ ಮಾತ್ರ ನೈತಿಕವೆಂದು ಸಾರಿ ಉಳಿದ ಸಂದರ್ಭಗಳಲ್ಲಿ ಅದನ್ನು ಅನೈತಿಕಗೊಳಿಸುವ ಮೂಲಕ ಸಾಮಾಜಿಕ ವ್ಯವಸ್ಥೆಯು ಅವಳ ಸಹಜ ಮನೋದೈಹಿಕ ಬಯಕೆಗಳನ್ನು ಹತ್ತಿಕ್ಕುತ್ತದೆ. ಹೀಗೆ ಹತ್ತಿಕ್ಕಲಾದ ಬಯಕೆಗಳು ಅವಳ ಮನೋಲೋಕದಲ್ಲಿ

ಸ್ಫೋಟಿಸಿದಾಗ ಬಾಹ್ಯದಲ್ಲಿ ಅಸಹಜವೆನಿಸುವ ವರ್ತನೆಗಳು ರೂಪುಗೊಳ್ಳುತ್ತವೆ. ದೇಹ ಮನಸ್ಸುಗಳ ಸಂಕೀರ್ಣ ಹೆಣ್ಣಿಗೆಯಲ್ಲಿ ರೂಪಗೊಳ್ಳುವ ಮನೋಲೈಂಗಿಕ ನೆಲೆಯಲ್ಲಿ ಸಂಭವಿಸುವ ದಮನ ಮತ್ತು ಪ್ರತಿಭಟನೆಗಳನ್ನು ಸೂಕ್ಷ್ಮವಾಗಿ ಅರ್ಥೈಸಿಕೊಳ್ಳಬೇಕಾಗುತ್ತದೆ.

ಸಮಾಜದ ಎಲ್ಲಾ ನೆಲೆಗಳಲ್ಲಿ ತನ್ನ ಅಧಿಕಾರವನ್ನು ವಿಸ್ತರಿಸುತ್ತಾ ಹೆಣ್ಣಿನ ಪ್ರತಿಭಟನೆಯ ಧ್ವನಿಯನ್ನೇ ಕಸಿದುಕೊಳ್ಳುವ ವ್ಯವಸ್ಥೆಯಲ್ಲಿ ಕೆಳವರ್ಗ, ಕೆಳಜಾತಿಗಳ ಹೆಂಗಸರು ತಮ್ಮ ಹೆಣ್ತನದ ಜೊತೆ ಜಾತಿ ವರ್ಗಗಳ ಹಿನ್ನೆಲೆಯಿಂದಲೂ ಶೋಷಣೆಗೆ ಒಳಗಾಗುತ್ತಾರೆ. ಲೇಖಕಿ ಗೀತಾನಾಗಭೂಷಣರ ಕೃತಿಗಳಲ್ಲಿ ಇಂತಹ ಕಾರ್ಯದ ನಾನಾ ಮುಖಗಳು ಅನಾವರಣಗೊಳ್ಳುತ್ತವೆ. ಬಲಿಷ್ಠ ವ್ಯವಸ್ಥೆಯಲ್ಲಿ ಬಲಿಪಶುವಾಗುವ ಹೆಣ್ಣಿನ ಅಸಾಹಯಕತೆಯು ವ್ಯವಸ್ಥೆಯ ಬಗೆಗಿನ ದೋಷವಾಗಿ ಮಾರ್ಪಡುತ್ತವೆ. 'ಬದುಕು' ಕಾದಂಬರಿಯಲ್ಲಿ 'ಜಮದಾರ ಮಲ್ಲಪ್ಪನ ಮಗಳು ಕಾಶಮ್ಮ ತನ್ನ ಕನಸಿನ ರಾಜಾಕುಮಾರನಂತಿರುವ ಸಾಹುಕಾರ ಲಿಂಗರಾಜನನ್ನು ಪ್ರೀತಿಸಿರುತ್ತಾಳೆ. ಅದನ್ನು ಒಪ್ಪದ ಅವಳ ತಾಯಿ ಅವಳನ್ನು ಬೈಯುತ್ತಾಳೆ. ತನ್ನ ಗಂಡನ ಮರ್ಯಾದೆಗೆ ಕುಂದು ತಂದಿ ನೀನು ಹಾದರಗಿತ್ತಿ ಎಂದಾಗ ಕಾಶಿ ತನ್ನ ತಾಯಿ ಮುಂದೆ ಪ್ರತಿಭಟಿಸುತ್ತಾ, "ನಾ ಯೇನೂ ಹಾದರಗಿತ್ತಿಯಲ್ಲ! ಲಿಂಗರಾಜಾ ನನಗೆ ಮದಿಮಾಡ್ಕೋತಿನೆಂತ ಭಾಷಾ ಕೋಟ್ಟಾನ... ನಾವಿಬ್ಬರೂ ಮದಿ ಮಾಡ್ಕೊಂಡು ದೂರ ದೇಶಾಂತ್ರ ಹೊಂಟೋಗ್ತಿವೆಂತ, ನೀವೆಲ್ಲರೂ ಇಲ್ಲಿ ಸುಕವಾಗಿರ್ರಿ..." (ಪು.೧೦) ಎಂದು ತಾಯಿಯ ವಿರೋಧ ಸಂಘರ್ಷ ಮಾಡುತ್ತಾಳೆಯಾದರೂ? ಅವಳು ಅವನನ್ನು ಮದುವೆಯಾಗುವುದಿಲ್ಲ. ನಂತರ ಅವಳಿಗೆ ಮಾರ್ತಂಡನೊಂದಿಗೆ ವಿವಾಹವಾಗುತ್ತದೆ. ಅವಳು ಅವನೊಂದಿಗೆ ಮೂರು-ನಾಲ್ಕು ವರ್ಷ ಬಾಳ್ವೆಮಾಡುತ್ತಾಳಾದರು ಅವಳ ಮನಸ್ಸಿನಿಂದ ಲಿಂಗರಾಜು ದೂರವಾಗಿರಲಿಲ್ಲ. ನಂತರ ದಿನಗಳಲ್ಲಿ ಸಾಹುಕಾರ ಲಿಂಗರಾಜಪ್ಪ ಕಾಶಮ್ಮನ ಗಂಡನ ಸಂಬಂಧವನ್ನು ಬಿಡಿಸಿ ತನ್ನ ತೋಟದ ಮನೆಯಲ್ಲಿ ಇರಿಸಿಕೊಂಡಿರುತ್ತಾನೆ. ಮೇಲ್ಜಾತಿಯ ಸಾಹುಕಾರ ಲಿಂಗರಾಜನು ಮದುವೆಯಾಗಿದ್ದರಿಂದ ಜಾತಿ ಸಮಸ್ಯೆಯುಂಟಾಗಿ ಗಲಭೆ ಉಂಟಾಗುತ್ತದೆ.

ಮ್ಯಾಗೇರಿಯವರು ಕೆಳಗೇರಿಯ ಹೆಣ್ಣನ್ನು "ಇಟ್ಟುಕೊಂಡವಳಾಗಿ" ನೋಡುತ್ತಾರೆಯೇ ಹೊರತು ಹೆಂಡತಿಯನ್ನಾಗಿ ಅಲ್ಲ, ಅವಳ ಒಗೆತನ ಹರಿಸಿ ಕರೆತಂದು ಇಟ್ಟುಕೊಳ್ಳುತ್ತಾರೆಯೇ ಹೊರತು ತಮ್ಮ ಕೌಟುಂಬಿಕ ಬದುಕಿಗೆ ಧಕ್ಕೆ ತಂದುಕೊಳ್ಳುವುದಿಲ್ಲ ಎನ್ನುವಂತ ಜಾತಿ-ವ್ಯವಸ್ಥೆಯ ಕ್ರೂರ ಮುಖಗಳು ಕಾಣಿಸಿಕೊಳ್ಳುತ್ತವೆ.

ಸಾವ್ಕರ ಲಿಂಗರಾಜಪ್ಪನ ಹೆಂಡತಿ ನೀಲಮ್ಮ ತನ್ನ ಗಂಡ ಕಾಶಮ್ಮನನ್ನು ಕರೆತಂದು ತೋಟದ ಮನೆಯಲ್ಲಿ ಇರಿಸಿಕೊಂಡಿರುವ ಸುದ್ದಿಯನ್ನು ತಿಳಿದು ಬರಸಿಡಿಲು(ಗರ)

ಬಡಿದವಳಾಗುತ್ತಾಳೆ. ಅವಳಿಗೆ ಅವನನ್ನು ಬಿಟ್ಟು ಬಿಡುವ (ವಿಚ್ಛೇದನ) ಮನಸ್ಸು ಬಂದರೂ ಅವಳು ತನ್ನ ತವರಿಗೆ ಹೋಗದೆ ಅವನ ತಪ್ಪನ್ನು ಕ್ಷಮಿಸಿ ತನಗೆ ತಾನೇ ಸಮಾಧಾನ ಮಾಡಿಕೊಂಡು ತನ್ನ ಮಗನಿಗೆ ತಾಯಿಯಾಗಿ ಅದೇ ಮನೆಯಲ್ಲಿ ಇರುತ್ತಾಳೆ. ಅವಳಿಗೆ ಎಷ್ಟೇ ಕೋಪ ರೋಷಗಳಿದ್ದರು ತನ್ನ ಗಂಡನ ವಿರುದ್ಧ ಪ್ರತಿಭಟಿಸಲಾಗದೇ ಅಸಹಾಯಕಳಾಗುತ್ತಾಳೆ. ಅವಳ ಸಂವೇದನೆಗಳನ್ನು ಅವಳೇ ಹತ್ತಿಕ್ಕಿಕೊಳ್ಳುವುದನ್ನು ಕಾಣಬಹುದು.

ಇಲ್ಲಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡಸರು ಎಷ್ಟೇ ಹೆಂಗಸರೊಂದಿಗಾದರೂ ತಮ್ಮ ಮಗ್ಗಲನ್ನು ಹೊರಳಾಡಿಸಿ ಬರಬಹುದು. ಆದರೆ ಹೆಂಗಸರು ಮಾತ್ರ ಒಬ್ಬ ಗಂಡನಿಗೆ ಮೀಸಲು ಇರಬೇಕು ಎನ್ನುವುದು ಮೇಲ್ಜಾತಿಯ ಗಂಡಸರಾದ ಗೌಡ, ಕುಲಕರ್ಣಿ, ಸಾವ್ಕಾರವರ ಆಶಯವಾಗಿರುತ್ತದೆ. ಅಂದರೆ ಅದೇ ಗಂಡಸರು ಕೆಳಜಾತಿ, ಕೆಳವರ್ಗದ, ಹೆಣ್ಣು ಮಕ್ಕಳನ್ನು ಜೋಗಿಣಿಯನ್ನಾಗಿ ಮಾಡಿಸಿ ಅವರ ಬಾಳನ್ನೇ ಹಾಳು ಮಾಡುತ್ತಾರೆ.

ಜೋಗಣಿಯನ್ನಾಗಿ ಮಾಡಿದ ಮಹಿಳೆಯರು ಎಷ್ಟು-ಕಷ್ಟ ನೋವುಗಳನ್ನು ಅನುಭವಿಸುತ್ತಾರೆ ಎಂಬುದನ್ನು "ನಿಂಬೆವ್ವಾಯಿ" ಎನ್ನುವ ಪಾತ್ರದ ಮೂಲಕ ಬಹುವಿಸ್ತಾರವಾಗಿ ವಿವರಿಸಿದ್ದಾರೆ. ನಿಂಬೆವ್ವ ತಾನು ಜೋಗಣಿಯಾಗಿ ಅನುಭೋಗಿಸಿ ಅನುಭವಿಸಿದ ಮಾತುಗಳನ್ನು ಜೋಗಣಿಯಾಗುವ ಪೋರಿಗೆ ಹೇಳುವ ರೀತಿಯಲ್ಲಿ ಸಮಾಜಕ್ಕೆ ಈ ರೀತಿಯಾಗಿ ಹೇಳಿದ್ದಾರೆ. "ನೀ ನಿಮ್ಮಪ್ಪನ ಮಾತಿಗಿ ಮಣಿದು ಜೋಗಣಿ ಆಗಬ್ಯಾಡಗ್ಯ ಪೋರೀ... ಇಸಾ ತಗೊಂಡು ಸಾಯಾದು ಬೇಕು. ಆದರೆ ಈ ಜೋಗಣಿ ಆಗಾದು ಬ್ಯಾಡವ್ವೋ...." (ಪು.೨೦೬) ಇಲ್ಲಿ ಕೆಳವರ್ಗದ ಕೆಳಜಾತಿಯ ಹೆಣ್ಣು ಮಕ್ಕಳು ಊರಗೌಡರ, ಕುಲಕರ್ಣಿ, ಶೆಟ್ಟಿ, ಸಾವ್ಕರಗಳ ಕುತಂತ್ರಕ್ಕೆ ಬಲಿಯಾಗುವುದನ್ನು ಕಾಣಬಹುದು.

ದೇವರ ಪೂಜೆ ಮಾಡುವ ಪೂಜಾರಪ್ಪನನ್ನು ತಮ್ಮ ವಶಕ್ಕೆ ಹಾಕಿಕೊಂಡು ಅವನಿಗೆ ಸಿಂದೀಗಿ(ಎಂಡ) ಕುಡಿಸಿ ಅವರಿಗೆ ಬೇಕಾದ ಕೆಳಗೇರಿಯ ಹೆಣ್ಣುಗಳನ್ನು ಅವನಿಗೆ ತಿಳಿಸುತ್ತಾರೆ. ಇದರಿಂದ ಪೂಜಾರಪ್ಪ ತನ್ನ ಮೇಲೆ ಚುಂಚೂರು ಮಾಪುರ ದೇವತೆ ಮೈಯಾ ಮೇಲೆ ಬಂದಾಳೆ ಅವಳಿಗೆ ನಿನ್ನ ಮಗಳನಾ ದೇವಿ ಸೇವೆಗೆ ಬೀಡಬೇಕು ಎಂದು ತಾಯಿ ಹೇಳುತ್ತಾಳೆ ಎಂದು ಹೆಣ್ಣಿನ ಜೀವನವನ್ನೇ ಹಾಳು ಮಾಡುವ ತಂತ್ರಗಾರಿಕೆಯನ್ನು ಪೂಜಾರಪ್ಪನ ಮುಖಾಂತರ ಊರಿನಗೌಡರು, ಸಾವ್ಕರರು, ಕುಲಕರ್ಣಿಗಳು ಮಾಡುತ್ತಾರೆ. ಅದೇ ರೀತಿಯಾಗಿ ನಿಂಬೆವ್ವ ಆ ದೇವರ ಆಚಾರ-ವಿಚಾರಗಳನ್ನು ಪ್ರತಿಭಟಿಸುತ್ತಾ ಪ್ರಶ್ನೆಯನ್ನು ಹಾಕುತ್ತಾಳೆ. "ಚುಂಚೂರು ದೇವತೆನೂ

ಹೆಣ್ಣು ದೇವರು ಹೆಣ್ಣು ದೇವರೇ ಹೆಣ್ಣು ಮಕ್ಕಳು ಮರ್ಯಾದಿ ಬಿಟ್ಟು ಸೂಳೇರಾಗ್ರಿ ಅಂತ ಯಾವ ಬಾಯಿಲಿಂದ ಹೇಳ್ತದೆ? ತನ್ನ ಹೆಸರಿನ ಮ್ಯಾಲ ಹಾದರದ ದಂಧಾ ಮಾಡ್ರಿ ಅಂತ ಯಾ ದೇವರೂ ಹೇಳಂಗಿಲ್ಲ."[೩] (ಪು.೨೦೬) ಅಂತ ಅವಳು ಹೇಳುತ್ತಾಳೆ. ವ್ಯವಸ್ಥೆಯನ್ನು ಪ್ರಶ್ನೆ ಮಾಡುತ್ತಾಳಾದರೂ ಅವಳ ಧ್ವನಿ ಯಾರಿಗೆ ಕೇಳುವುದಿಲ್ಲ. ಇಲ್ಲಿ ಹಳ್ಳಿಯ ಮುಗ್ಧ ಹೆಂಗಸು ತನ್ನ ತಂದೆ-ತಾಯಿಯರ ಒತ್ತಾಯಕ್ಕೆ ಜೋಗಣಿಯಾದ ತುಳಜಾ, ಜೋಗಣಿಯಾಗಿ ಆರೆಂಟು ತಿಂಗಳಾದ ಮೇಲೆ ಒಮ್ಮೆ ಕಲ್ಬುರ್ಗಿಯ ಸಂತೆಯಲ್ಲಿ ದೇವಿಯ ಮಹಿಮೆಯ ಹಾಡು-ಹೇಳುತ್ತಾ ನರ್ತಿಸುತ್ತಿರುತ್ತಾಳೆ. ಆಗ ಅವಳ ಧ್ವನಿಗೆ ಸೌಂದರ್ಯಕ್ಕೆ ಮಾರುಹೋದ ಹುಸೇನಪ್ಪ ಅವಳನ್ನು ಜೋಗಣಿ ಪದ್ಧತಿಯಿಂದ ಮುಕ್ತಗೊಳಿಸಿ ಮದುವೆಯಾಗುತ್ತಾನೆ. ಅವಳನ್ನು ಬಾಂಬೆಯಂತಹ ನಗರಕ್ಕೆ ಕರೆದುಕೊಂಡು ಹೋಗುತ್ತಾನೆ. ಅವರು ಮೂರು ವರ್ಷದ ಬಳಿಕ ತಮ್ಮ ಹಳ್ಳಿಗೆ ತಂದೆ-ತಾಯಿಯನ್ನು ನೋಡಲು ಪತಿ ಮತ್ತು ಮಗನ ಜೊತೆ ಬರುತ್ತಾಳೆ. ಇದರಿಂದ ಆ ಹಳ್ಳಿ ಸಾವ್ಕರ, ಪೂಜಾರಿ, ಕುಲಕರ್ಣಿಯಂತವರ ಕೆಂಗಣ್ಣಿಗೆ ಗುರಿಯಾಗುತ್ತಾಳೆ. ಆ ಹಳ್ಳಿಯ ಕೆಲವು ಜನರು ಇವಳನ್ನು ಬೆಂಬಲಿಸಿದ್ದರೆ, ಇನ್ನೂ ಕೆಲವರು ವಿರೋಧಿಸುತ್ತಾರೆ.

ಇವಳು ಜೋಗಿಣಿಯಾಗಿ ಗಂಡನ ಕೂಡ ಸಂಸಾರ ಮಾಡಿದರೆ ಇವಳನ್ನೇ ಅನುಸರಿಸಿ ಜೋಗಣಿಯರೆಲ್ಲ ಮದುವೆ ಮಾಡಿಕೊಂಡು ಪತಿವ್ರತೆಯರಾದರೆ ಮುಂದ ಯಾವ ಹೆಣ್ಣನೂ ಜೋಗಣಿ ಆಗಲಿಕ್ಕ ಮುಂದೆ ಬರಂಗಿಲ್ಲ ಎಂದು ಅವರು ತುಳುಜಾನನ್ನು ಪಂಚಾಯ್ತಿಗೆ ಕರೆಸಿ ಅವಳ ತಂದೆ-ತಾಯಿ ಇರುವ ಮನೆಗೆ ಬೆಂಕಿಯನ್ನು ಹಚ್ಚುತ್ತಾರೆ. ಪಂಚಾಯ್ತಿಯಲ್ಲಿ ತುಳುಜಾಗೆ ದಂಡವನ್ನು ಹಾಕಿ ತನ್ನ ಗಂಡನನ್ನು ಬಿಟ್ಟು ಮೊದಲಿನಂತೆ ಜೋಗಿಣಿಯಾಗಿ ತಾಯಿ ಸೇವೆ ಮಾಡಬೇಕು. ತುಳಾಜಾರ ತಂದೆ-ತಾಯಿಯನ್ನು ಊರಿಂದ ಬಹಿಷ್ಕಾರ ಹಾಕಿದರು. ತುಳಜಾ ಪಂಚಾಯಿತಿಯಲ್ಲಿ "ನೋಡು ಪೂಜಾರೆಪ್ಪ ಮುತ್ತ್ಯಾ.... ನಿಂದು ಮತ್ತ ನೀ ಮಾಡಾ ಜೋಗಣೇರ ಧರ್ಮಾಕರ್ಮಾ ಯಾವುದೂ ನನಗ ತಿಳೆಂಗಿಲ್ಲೆಪ್ಪ...." ಬ್ಯಾಡ ಬ್ಯಾಡಂತ ಕೈ ಜೋಡ್ಸಿ ಕಾಲಿಗಿ ಬಿದ್ದಿದ್ದ ನಾನು. ನಿನ್ನ ಮುಂದ ನೆಲಕ್ಕ ಬಿದ್ದು ಬ್ಯಾಡೋ ಮುತ್ತ್ಯಾ ಅಂತ ಹೊಳ್ಯಾಡದರನೂ ನನಗ ಜಬರದಸ್ತಿಲಿಂದ ಎಳ್ಕೊಂಡೊಯ್ದು ಜೋಗಣಿ ಮಾಡಿ ಹಲ್ಕಟ್ ಧಂದೆಗೆ ಹಾಕ್ದಂವಾ ನೀನೇ ಎಂದಳು"(ಪು.೨೨೦) ಅವಳನ್ನು ಬಲವಂತವಾಗಿ ಇಷ್ಟವಿಲ್ಲದಿದ್ದರೂ ಜೋಗಣಿ ಮಾಡಿ ಈ ಹಲ್ಕಟ್ ಕೆಲಸ ಮಾಡಲಿಕೆ ನೀನೆ ಕಾರಣನಾದೆ ಆ ದೇವಿ ನಿನ್ನ ಮೈಯಾಗ ಬರುತ್ತಾಳೋ ಇಲ್ಲೋ ಗೊತ್ತಿಲ್ಲ ಆದರೆ ನೀನೇ ಹೇಳಿಕೆ (ದೇವರು ಮೈ ಮೇಲೆ ಬಂದಾಗ ಆಡುವ ಮಾತು) ಮಾಡಿ ನಮ್ಮ ಕೇರಾಗಿನ ಹಸಿಬಿಸಿ ಹರೇದ ಹೆಣ್ಣು ಮಕ್ಕಳನ್ನು ದೇವರಿಗೆ ಕುರಿ, ಕೋಳಿ ಬಲಿಕೊಡುವಂತೆ ಅವರನ್ನು ಬಲಿಕೊಡುತ್ತಿ

ಎಂದಳು. "ಮುತ್ತ್ಯಾ... ಖರೆ ಹೇಳು ನೀನು ಆ ಮಾಪುರತಾಯಿ ನಿನ್ನ ಮೈಯಾಗ ಬಂದು ನಮ್ಮ ಕೇರ್‍ಯಾಗೀನ ಹರೇದ ಚಲುವಿನ ಪೋರಿಗೋಳಿಗಿ ಸೂಳೇರು ಆಗಲಿ ಅಂತ ಹೇಳ್ತಾಳೇನು? ನೀ ಖರೇ ಆಕಿನ ಭಕ್ತ ಇದೆಂದ್ರ ಆ ದೇವಿಮ್ಯಾಲ ಆಣೆ ಮಾಡಿ ಹೇಳು ನೀನೂ" (ಪುಟ.೨೨೧) ಅಂದಳು. ತುಳಾಜಾ ಈ ರೀತಿಯಾಗಿ ಪಂಚಾಯತಿಯಲ್ಲಿ ಸಂಘರ್ಷಕ್ಕೆ ಇಳಿಯುತ್ತಾಳೆ. ಇವಳನ್ನು ನೋಡಿದ ಜನರೆಲ್ಲ ದಂಗಾಗುತ್ತಾರೆ. ಜೋಗಣಿಯವರು ತಮ್ಮ ಯೌವ್ವನ ಇರುವವರೆಗೂ ತಾವು ಸುಖವಾಗಿ ಬದುಕುತ್ತಾರೆ. ಅವರ ಮುಪ್ಪಿನ ಕಾಲದಲ್ಲಿ ಅವರನ್ನು ಮಕ್ಕಳನ್ನು ಸಹ ನೋಡಿಕೊಳ್ಳುವುದಿಲ್ಲ. ಕೊನೆಯವರೆಗೆ ಜೊತೆಗಿರಲೂ ಗಂಡನೂ ಇರುವುದಿಲ್ಲ. ಇದರಲ್ಲಿ ಗೋರವ್ವ-ಜೋಗಣಿ ಮುದಕ್ಯಾಗಿ ಲಕ್ವಾ ಹೊಡ್ದು ಬಿದ್ದಾಳ. ಆಕೀಗಿ ಯಾರೂ ನೋಡಿಕೊಳ್ಳುವವರಿಲ್ಲ. ಆಕಿಗಿನೂ ಗಂಡ ಮಕ್ಕಳು ಅಂತಿದ್ದರೆ ಆಕಿನ ಗತಿ ಹಿಂಗಾಗ್ತಿತ್ತಿರಲಿಲ್ಲ ಎಂದು ತುಳಜಾ ಪ್ರಶ್ನೆ ಮಾಡುತ್ತಾಳೆ. ಕೊನೆಗೆ ತುಳಾಜಾ ಪಂಚಾಯತಿಯವರಿಗೆ "ದೈವದವರೇ... ನೀವೂ ಒಂದೀಟು ನನ್ನ ಪೈಸಲಾನೂ ಕೇಳಿ ಹೋಗ್ರೀ... ನೀವುಕೊಟ್ಟ ತೀರ್ಮಾನ ನಮಗೆ ಒಪ್ಪಿಗಿಯಿಲ್ಲ." (ಪು.೨೨೫) ನಿಮ್ಮದು ಏಕಮಾತ್ರ ನ್ಯಾಯ ನಾವೇನೂ ತಪ್ಪು ಮಾಡಿಲ್ಲ ದಂಡ ಕಟ್ಟಂಗಿಲ್ಲ ನೀವು ನಮ್ಮ ಅಪ್ಪನನ್ನು ಕುಲದಿಂದ ಕೇರಿಲಿಂದ, ನೀವೇನು ಹೊರಗಿಡಿತ್ತೀರಿ ನಾನೇ ನಮ್ಮ ಅಪ್ಪ-ಅವ್ವನನ್ನು ಈ ಊರಿನಿಂದ ಕೇರಿಲಿಂದ ದೂರ ಕರೆದುಕೊಂಡು ಹೋಗುತ್ತೀನಿ ಎಂದು ಅವಳು ಹೊರಟು ಬಂದಳು, ತುಳಜಾ ವ್ಯವಸ್ಥೆಯ ವಿರುದ್ಧ ಸಂಘರ್ಷಕ್ಕೆ ಇಳಿದು ಹೋರಾಟ ನಡೆಸಿದರು ಅವಳ ಪರವಾಗಿ ಯಾರು ಧ್ವನಿ ಎತ್ತುವುದಿಲ್ಲ ಬದಲಾಗಿ ಅವಳು ಬಹಳ ಮುಂದುವರಿದು ಹೆಣ್ಣು ಎಂದು ಆಡಿಕೊಳ್ಳುತ್ತಾರೆ. ಹೀಗೆ ಮಹಿಳೆಯರ ನೋವು-ನಲಿವು, ಶೋಷಣೆ, ದಬ್ಬಾಳಿಕೆಗಳ ವಿಭಿನ್ನ ನೆಲೆಗಳಲ್ಲಿ ಮಹಿಳೆಯರ ಸಂವೇದನೆಯ ಅಂಶಗಳನ್ನು ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ.

**೨. ಜಾತಿ ಮತ್ತು ವರ್ಗ ವಿರೋಧ ನೆಲೆಗಳು**

ಪ್ರಾಚೀನ ಕಾಲದಿಂದಲೂ ಚತುರ್ ವರ್ಣಗಳನ್ನು ನಿರ್ಮಿಸಿಕೊಂಡು ಅವುಗಳನ್ನು ಶ್ರೇಣಿ ಪ್ರಕಾರ ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರ ಎಂಬಂತೆ ಮಾಡಿಕೊಂಡು ಮೇಲ್‌ವರ್ಗದ ಜನರು ಶೂದ್ರ ವರ್ಗವನ್ನು ಬಹಳ ಹೀನಾಯ ಸ್ಥಿತಿಯಲ್ಲಿ ನಡೆಸಿಕೊಂಡು ಬಂದಿರುವುದನ್ನು ತಲತಲಾಂತರದಿಂದ ಕಾಣಬಹುದು. 'ಬದುಕು' ಕಾದಂಬರಿಯಲ್ಲಿ ಜಾತಿ ಮತ್ತು ವರ್ಗದ ನೆಪವೊಡ್ಡಿ ಮಹಿಳೆಯರಿಗೆ ನೋವುಂಟು ಮಾಡಿರುವುದನ್ನು ವಿಭಿನ್ನ ನೆಲೆಗಳಲ್ಲಿ ಕಾದಂಬರಿಯಲ್ಲಿ ಗುರುತಿಸಿರುವುದನ್ನು ಕಾಣಬಹುದು.

ಕಾಶಮ್ಮ ತನ್ನ ಹರೆಯದಲ್ಲಿ ತನ್ನ ಸಂಗಾತಿಯ ಕುರಿತು ಕನಸು ಕಂಡವಳು ಕೆಳವರ್ಗದಲ್ಲಿ ಹುಟ್ಟಿ ತಾನು ಅನಕ್ಷರಸ್ಥಳಾಗಿ ಬೆಳೆದಿದ್ದರೂ ತನ್ನ ಗಂಡನಾಗುವನು ಬೆಳ್ಳಗಿನ ಮಲ್ಲಿನ ದೋತ್ರ ಬಿಳಿಯ ಅಂಗಿ, ಕೈಯಲ್ಲಿ ಮಿಂಚುವ ಗಡಿಯಾರ ಬೆರಳಲ್ಲಿ ಥಳ-ಥಳಿಸುವ ಬಂಗಾರದ ರಿಂಗುಗಳು ಮೇಲ್ವರ್ಗದವರಂತೆ ಶಾಲೆಯನ್ನು ಕಲಿತವನೇ ತನ್ನ ಗಂಡನಾಗಬೇಕೆಂದು ಬಯಸುತ್ತಾಳೆ. ಕಾಶಮ್ಮ ಆಸೆ ಪಟ್ಟ ಹಾಗೇ ಊರ ಸಾಹುಕಾರನ ಮಗ ಈಕೆಯನ್ನು ಪ್ರೀತಿಸಿ ಮದುವೆಯಾಗಲು ಒಪ್ಪಿದಾಗ ಮೇಲ್ವರ್ಗದವರಲ್ಲಿ ಹಾಗೂ ಕೆಳವರ್ಗದ ಕಾಟಗರಿಗೆ ನಡೆಯುವ ಸಾಂಸ್ಕೃತಿಕ ಸಂಘರ್ಷ ಕಾಶಮ್ಮ ಲಿಂಗರಾಜಪ್ಪನ ಮನಸ್ಸುಗಳು ಒಂದಾಗಿದ್ದರೂ ಅವರನ್ನು ಒಂದು ಮಾಡಲು ಎರಡು ವರ್ಗದ ಜನ ನಿರಾಕರಿಸುತ್ತಾರೆ.

ಸಾವ್ಕಾರರು, ಗೌಡರು, ಕುಲಕರ್ಣಿಗಳು, ಬೇಕಾದರೆ ಕೆಳವರ್ಗದ ಹೆಣ್ಣು ಮಕ್ಕಳನ್ನು ರಂಡೆಯರನ್ನಾಗಿ ಇಟ್ಟುಕೊಳ್ಳುತ್ತಾರೆ. ವಿನಃ ಅವರು ಕೆಳವರ್ಗದ ಹೆಣ್ಣುಮಕ್ಕಳನ್ನು ಮದುವೆಯಾಗುವುದಿಲ್ಲ. ಅದೇ ರೀತಿಯಾಗಿ ಮುಂದೆ ಲಿಂಗರಾಜಪ್ಪ ಕಾಶಮ್ಮನನ್ನು ಅವಳ ಗಂಡನಿಂದ ಹಒಗೆತನ ಹರಿಸಿಕೊಂಡು ಬಂದು ತನ್ನ ತೋಟದ ಮನೆಯಲ್ಲಿ ಇರಿಸಿಕೊಳ್ಳುತ್ತಾನೆ 'ಅದೇ ರೀತಿಯಾಗಿ ಕನಸು ಕಂಡ ಮತ್ತೊಂದು ಹೆಣ್ಣು ಮಗಳೆಂದರೆ, ನೀಲವ್ವ ಅವಳು ತಮ್ಮ ಕೇರಿಯವನಾದ ತುಕ್ಕಪ್ಪನನ್ನು ಪ್ರೀತಿಸಿರುತ್ತಾಳೆ. ಆದರೆ ನೀಲವ್ವನ ತಂದೆ-ತಾಯಿರು ಆಕೆಯನ್ನು ಮಾಪುರ ತಾಯಿಯ ಸೇವೆಗೆ ಬಿಡಲು ತಯಾರಾಗಿರುತ್ತಾರೆ. ಮೊದಲು ಭರಮ್ಯಾ ಮತ್ತು ಅವನ ಹೆಂಡತಿ ಮರಗಿಗೆ ತನ್ನ ಮಗಳನ್ನು ಜೋಗಣಿ ಮಾಡಲಿಕ್ಕ ಇಷ್ಟವಿರುವುದಿಲ್ಲ. ಆದರೂ ಅವರು ಗುಡಿ ಪೂಜಾರಪ್ಪ ಹೇಳಿದ ಮಾತುಗಳು ಸಾಕ್ಷಾತ್ ಮಾಪುರ ತಾಯಿಯೇ ಹೇಳಿದ್ದಾಳೆ ಎಂದು ನಂಬಿ ಅವಳಿಗೆ ಮುತ್ತು ಕಟ್ಟಿಸಲು ಮಗಳನ್ನು ಒಪ್ಪಿಸುತ್ತಾರೆ. ಕೆಳವರ್ಗದ ತಂದೆ-ತಾಯಿರು ತಮ್ಮ ಮಗಳನ್ನು ಜೋಗಣಿ ಮಾಡಲು ಎಷ್ಟೊಂದು ನೋವುಗಳನ್ನು ಅನುಭವಿಸುತ್ತಾರೆ ಎನ್ನುವುದನ್ನು ಈ ರೀತಿಯಾಗಿ ವಿವರಿಸಲಾಗಿದೆ.

"ಅಲ್ಲಗ್ಯ ಮರಗೀ..... ನೀಲವ್ವ 'ಜೋಗಣಿ' ಮಾಡ್ಬಕಂತ ಯಾಕ ಹರಕಿ ಹೊತ್ತೀರೇ? ಮಗಳಿಗಿ ಜೋಗಣಿ ಮಾಡಾದಂದ್ರೆ ನಿಮಗ ಸಂತೋಷದಾ ಯೇನು?" ಕೇಳಿದಳು "ಎಲ್ಲಿ ಸಂತೋಸೇ ನನ್ನ ಹಡದವ್ವಾ.... ಮಗಳಿಗಿ ದೇವಿ ಸೇವಕ್ಕ 'ಜೋಗಿಣಿ' ಬಿಡಾದು ಅಂದ್ರ ಈ ನನ್ ಹೊಟ್ಯಾಗಿನ ಕಳ್ಳನ್ಯಾಗ ಮುಳ್ಳಾಡ್ತವೇ ತಾಯಿ(ಪು.೩೩) ಎಂದು ಮರಗಿ ತನ್ನ ಒಡತಿಯಾದ ಮಲ್ಲವ್ವನ ಮುಂದೆ ತನ್ನ ನೋವನ್ನು ಮನ ಮಿಡಿಯುವಂತೆ ತೋಡಿಕೊಂಡಿದ್ದಾಳೆ.

'ಜೋಗಿಣಿ' ಎಂದರೆ, ಮಾಪುರ ತಾಯಿ ದೇವಿಯ ಸೇವಾಕ್ಕ ಪೂರ ಮೀಸಲಾದ ಹೆಣ್ಣು ಅವಳು ಸಾಯುವವರೆಗೂ ಬೇರೆ ಮದುವೆಯಾಗುವಂತಿಲ್ಲ ಪಟ್ಟಕ್ಕೆ ಹಾಕಿಕೊಂಡ

ಗೌಡನೋ, ಕುಲಕರ್ಣಿಯೋ, ಸಾವ್ಕರನೋ, ಅವಳಿಗೆ ಸೀರೆ, ಕುಪ್ಪಸ, ಬಂಗಾರ, ಒಡವೆ, ವಸ್ತ್ರ, ತಾಳಿ ಸಾಮಾನು, ಹಸುರು ಬಳೆ, ಕಾಲುಂಗರ ಮೊದಲಾದ ಎಲ್ಲಾವನ್ನು ಕೊಡಬೇಕು. ಅವಳಿಗೆ ಸುರಿಗೆ ಸುತ್ತಿ ಮೀಯಿಸಿ ಅವಳ ಎಡಕ್ಕೆ ಒಂದು ತಲವಾರ (ಕತ್ತಿ) ಇಟ್ಟು ಅದನ್ನೇ ಗಂಡನೆಂದು ಸಿಂಗರಿಸಿ ಅದರೊಂದಿಗೆ ಅವಳ ಮದುವೆಯ ಶಾಸ್ತ್ರಗಳೆಲ್ಲ ಮಾಡಿ ತಾಳಿಸ್ತ್ರ ಕಟ್ಟುತ್ತಾರೆ. ತಲೆಯ ಮೇಲೆ ಬಿದಿರ ಬುಟ್ಟಿಯಿಂದ ಪರಡಿ ಹೊರಿಸುತ್ತಾರೆ. ಬಗಲಲ್ಲಿ ಚೌಡಕಿ ಕೊಡುತ್ತಾರೆ. ಅಂದಿನಿಂದ ಅವಳು ಚುಂಚೂರು ಮಾಪುರ ತಾಯಿಯ ಜೋಗುಣಿಯಾಗುತ್ತಾಳೆ. ಅಂದು ರಾತ್ರಿ ಪಟ್ಟಕ್ಕೆ ಹಾಕಿಕೊಂಡವನು ಅವಳ ಮೈಯ ಮೀಸಲು ಮುರಿದು ಕನ್ಯತ್ವವನ್ನು ಕಳೆದು ಅವಳನ್ನು ಹೆಣ್ಣು ಮಾಡುತ್ತಾನೆ. ಅಷ್ಟೆ ಮುಂದೆಲ್ಲಾ ಅವಳು ದೇವಿಯ ಹೆಸರಿನ ಮೇಲೆ ಬಂದ ಗಂಡಸರಿಗೆಲ್ಲಾ ಸೆರಗು ಹಾಸುತ್ತಾ ಅವರ ಮಗ್ಗಲು ಬಿಸಿ ಮಾಡುತ್ತಾ ಅವರ ಕಾಮದ ತಿಂಡಿಗೆ ಬಲಿಯಾಗುತ್ತ ದಿನಗಳೆಯಬೇಕು. ಇಂತಹ ಪದ್ಧತಿಯಿರುವ ಕೇವಲ ಕೆಳಜಾತಿಗಳಲ್ಲಿ ಮಾತ್ರ ಎನ್ನುವುದನ್ನು ಈ ಮುಂದಿನಂತೆ ವಿವರಿಸಿದ್ದಾರೆ.

"ಆ ದೇವತಿ ಈ ಹೆಣ್ಣು ಪೋರಿಗೋಳಿಗಿ 'ಜೋಗಣಿ' ಆಗಿ ಹಾದರ ಮಾಡಂತ ಹೇಳ್ತಾಳಂತಿ? ಆಕಿನೂ ಹೆಣ್ಣಲ್ಲ? ದೇವರಾದ್ರೇನು ದೆವ್ವಾದ್ರೇನು.... ಹೆಣ್ಣು ಹೆಣ್ಣೇ ಅಲ್ಲೇನು? ಹಿಂತಾ ಹಲ್ಕಟ್ ಹರಕಿ ಮಾಡ್ರಿ ಅಂತ ಹೇಳ್ತಾಳೇನು ದೇವಿ... ಮತ್ತ ಹಿಂತಾ ಹರಕಿ, ಅದೇ ಕೆಳಜಾತಿ ಮಂದಿನೇ ಮಾಡ್ತಾರ... ಮ್ಯಾಲಿನ ಜಾತಿ ಮಂದಿ ತಮ್ಮ ಹೆಂಗಸರಿಗಿ ಹಿಂಗ್ ಜೋಗಿಣಿ ಬಿಡ್ತಾರಾ ಎಂದರೆ? ಅವರಿಗಿಲ್ಲದ ಹರಕಿ ಇವರಿಗ್ಯಾಕೋ...(ಪು.೬೭) ಎಂದು ಕೆಳಜಾತಿ ಹೆಣ್ಣುಮಕ್ಕಳು ಅನ್ಯಾಯಕ್ಕೆ ಒಳಗಾಗುವುದನ್ನು ಈ ರೀತಿಯಲ್ಲಿ ಹೇಳಿದ್ದಾರೆ.

ಕೊನೆಗೆ ನೀಲವ್ವ ತಾನು ಪ್ರೀತಿಸಿದವನನ್ನು ಪಡೆಯಲಾಗದೇ ಇತ್ತ ಜೋಗಿಣಿಯಾಗಿ ಇಂತಹ ಹಲ್ಕಟ್ ಬದುಕನ್ನು ಬದುಕಲಾಗದೇ ಅವಳು ಬಾವಿಯಲ್ಲಿ ಬಿದ್ದು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾಳೆ. ನೀಲವ್ವನ ಆಸೆ-ಆಕಾಂಕ್ಷೆಗಳು ಕೂಡ ಅವಳ ಜೊತೆಗೆ ಮಣ್ಣಲ್ಲಿ ಮಣ್ಣಾಗಿ ಹೋಗುತ್ತವೆ. ಮಹಿಳೆಯರು ಮೇಲ್ವರ್ಗದ ಗಂಡಸರಿಂದ ಮಾತ್ರ ಶೋಷಣೆಗೆ ಒಳಗಾಗದೇ ತಮ್ಮದೇ ಜಾತಿಯ ಗಂಡಸರಿಂದ ನೋವನ್ನು ಅನುಭವಿಸುತ್ತಾರೆ. ಮಲ್ಲಪ್ಪ ಜಮದಾರನು ಮಲ್ಲವ್ವನನ್ನು ಮದುವೆಯಾಗಿ ಸುಖದಿಂದ ಇದ್ದರೂ ಕೂಡ ಕೊರವರ ಈರಮ್ಮನ ಜೊತೆ ಮತ್ತು ಕೇರಿಯ ಜೋಗಿಣಿಯವರ ಜೊತೆಯಲ್ಲಿ ಅನೈತಿಕ ಸಂಬಂಧವನ್ನು ಬೆಳಿಸಿದ ಇದರಿಂದ ಮಲ್ಲವ್ವ ಮನನೊಂದು ಗಂಡನೊಂದಿಗೆ ಜಗಳಕ್ಕೆ ನಿಂತಳು. ಇದರಿಂದ ಮಲ್ಲಪ್ಪ ಹೆಂಡತಿಗೆ ಬೈಗುಳ, ಹೊಡೆತಗಳನ್ನು ಕೊಟ್ಟನು ಮಲ್ಲವ್ವ ಈ ವಿಷಯವನ್ನು ತನ್ನ ತವರಿನವರಿಗೆ ಹೇಳಿದಳು. ಅವರು ಇವನಿಗೆ ಈ ಹಲ್ಕಟ್‌ಗಿರಿ

ಬಿಟ್ಟುಬಿಡು ಅಂತ ಬುದ್ಧಿಹೇಳಿದರು. "ಇನ್ನೊಮ್ಮಿ ಹಿಂತದ್ದೇನೆರ ಸುದ್ದಿ ನನ್ನ ಕಿವಿಗಿ ಬಿದ್ದರ ನೋಡು ತಮ್ಮಾ... ನಿನ್ನ ಕುಂಡಿ ಎಲು ಮುರೀತಿನಿ. ನನ್ ಮಗಳಿಗಿ ಕರ್‍ಕೊಂಡು ಹೋಗ್ತೀನಿ. ಪೋಲೀಸ್ ಠಾಣೆದಾಗ ರಿಪೋರ್ಟು ಕೊಟ್ಟು ನಿನ್ನ ಜಮಾದಾರ್ಕಿ ನೋಕರಿ ಕಳ್ದು; ಕಟ್ಟಿ ಕಛೇರಿ ಅಂತ ತಿರಗಲ ಹಚ್ತೇನಿ... ಅಂತೆಲ್ಲ ಹೆದರಿಸಿ ಬೆದರಿಸಿ ಹೋದರು ಅಂದರೆ ಮಲ್ಲಪ್ಪ ಹೆಂಡತಿಯ ಹಾಸಿಗೆಗೆ ಹೋಗದೆ ಕುಂತರೆ ನಿಂತರೆ ಧುಸು, ಮುಸು, ಧುಸು, ಮುಸು ಮಾಡುತ್ತಿದ್ದನು. (ಪು. ೯)

"ನಿನ್ ನೆತ್ತಿಮ್ಯಾಲ ಮೆಟ್ಟಾಡ್ಸಿ ಕೂದಲುದರಸ್ತಿನೇ ರಂಡೀ... ಇಲ್ಲ ಸಲ್ಲದ್ದೆಲ್ಲಾ ಹೇಳಿ ನಿಮ್ಮಪ್ಪಗ ಕರ್‍ಸಿ, ನನಗ ಅಂಜಸಲಕ್ಕಕ್ಕ ನೋಡ್ತ್ಯಾ ನಿನ್ನವ್ವನ ಬೋಸಡೀ... ನ್ಯಾಯಾ ನನ್ಮಗನಿಗಿನೂ ಅಂಜಾ ಗಂಡಲ್ಲಂತ ತಿಳ್ಕೋ... ನಿನ್ ತಾಳಿ ಹರ್‍ಕೊಂಡು ಹಚಗುಡ್ತೀನಿ; ನಿನ್ನ ತವರುಮನೀಗಿ... ನನಗೇನು ನಿನ್ನಂತಾ ಮೆಟ್ಟುಗೋಳು ನನ್ ಕಾಲಿಗಿ ಬರಾವೇಸೂ ಹೋಗಾವೇಸೂ.... ನಾಯಿ ಮಾರೀದು ಇದರವ್ವನಾ (ಪು.೯) ಮಲ್ಲಪ್ಪ ಜಮದಾರ ಮಲ್ಲವ್ವನನ್ನು ಮೊದಮೊದಲು ಬೈಯುತ್ತಿದ್ದ ಆದರೆ ಗಂಡಸರಿಗೆ ಎಷ್ಟು ಜನ ಸ್ತ್ರೀಯರೊಂದಿಗೆ ಸಂಬಂಧ ಇರಿಸಿಕೊಳ್ಳುವುದುನ್ನು ಇಲ್ಲಿ ಪ್ರತಿ ಬಿಂಬಿಸಲಾಗಿರುತ್ತದೆ.

**೩. ಜಮೀನ್ದಾರಿ ನೆಲೆಗಳು**

ಜಮೀನ್ದಾರಿ ಪದ್ಧತಿಯು ತಲತಲಾಂತರದಿಂದ ನಡೆದುಕೊಂಡು ಬಂದ ವ್ಯವಸ್ಥೆಯಾಗಿದೆ. ಈ ವ್ಯವಸ್ಥೆಗೆ ಬಲಿಯಾಗುವವರು ಮಾತ್ರ ಮುಗ್ಧ ಹೆಂಗಸರು. ಈ ಜಮೀನ್ದಾರರು ಹಳ್ಳಿಯ ಮುಗ್ಧ ಹೆಂಗಸರನ್ನು ಬಲಿತೆಗೆದುಕೊಳ್ಳುತ್ತಾರೆ. ಕಾದಂಬರಿ ಕಾರ್ತಿರವರು 'ಬದುಕು' ಕಾದಂಬರಿಯಲ್ಲಿ ಹೆಣ್ಣು ಮಕ್ಕಳು ಅನಿಷ್ಟ ಪದ್ಧತಿಗಳಿಗೆ ಬಲಿಯಾಗುತ್ತಿರುವ ಅನೇಕ ಅಂಶಗಳನ್ನು ವಿವರಿಸಿದ್ದಾರೆ.

ಯಜಮಾನ್ಯದ ಸ್ವರೂಪವು ನಿರಂತರವಾಗಿ ಬದಲಾಗುವ ಚಲನಶೀಲ ಪ್ರಕ್ರಿಯೆಯೂ ಆಗಿರುತ್ತದೆ. ಬೌದ್ಧಿಕ ಹುನ್ನಾರಗಳಿಂದಲೇ ತನ್ನ ಬಲವನ್ನು ಸ್ಥಾಪಿಸುವುದು. ಯಜಮಾನ್ಯದ ಮುಖ್ಯ ಲಕ್ಷಣ. ರಾಜಕೀಯ, ಧಾರ್ಮಿಕ ಮತ್ತು ಆರ್ಥಿಕ ವ್ಯವಸ್ಥೆಯನ್ನು ಬಳಸಿಕೊಳ್ಳುವುದರ ಜೊತೆಗೆ ಸಮಾಜದ ಮೇಲೆ ತಾನು ಹೊಂದಿರುವ ಯಜಮಾನಿಕೆಯನ್ನು ಬಳಸಿಕೊಳ್ಳುವುದನ್ನು ಸಮರ್ಥಿಸಿಕೊಳ್ಳುವಂತ ತಾತ್ವಿಕತೆಯೂ ಇದಾಗಿರುತ್ತದೆ. ಅಂತೆಯೇ ಸಾಮಾಜಿಕ ಸಂದರ್ಭ, ಸರಕಾರಗಳು ಬದಲಾದರೂ ಯಜಮಾನಿಕೆ ಆಳುವ ಸಮ್ಮತಿಯನ್ನು ತನ್ನ ತಂತ್ರದಿಂದಲೇ ಪಡೆಯುತ್ತಲೇ ಅವರನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳುತ್ತದೆ. ಯಜಮಾನವು ಜನತೆಯಲ್ಲಿ ಒಂದು ಮಾನಸಿಕವಾದ ಪ್ರವೃತ್ತಿಯನ್ನು ನಿರ್ಮಿಸುತ್ತಲೇ ತನ್ನನ್ನು ಒಪ್ಪಿಕೊಳ್ಳುವಂತೆ ಮಾಡುವ ಕ್ರಿಯೆಯು

ಮಾರ್ಮಿಕವಾದುದು ಯಜಮಾನ ತನ್ನ ಹಿಡಿತಕ್ಕೆ ಸಿಗುವ ಎಲ್ಲಾ ಶಕ್ತಿಗಳನ್ನು ಪ್ರತಿಭಟನೆಗಳನ್ನು ಪ್ರತಿರೋಧಗಳನ್ನು ಹತ್ತಿಕ್ಕುತ್ತದೆ. ಹೀಗೆ ಹತ್ತಿಕ್ಕಲು ಬಲ ಅಥವಾ ಶಕ್ತಿಗಿಂತ ಸಮ್ಮತಿಯ ಮಾರ್ಗಗಳನ್ನು ವಾಸ್ತವವಾಗಿ ಪ್ರಕಟವಾಗುತ್ತವೆ. ಆದರೆ ಅದು ಆ ಸಮಾಜದ ಒಪ್ಪಿಗೆ ಬೆಂಬಲವನ್ನು ಪಡೆದು ಪ್ರಗತಿ ಅಭಿವೃದ್ಧಿ ಸಹಾಯ ಮೊದಲಾದ ಆಮಿಷಗಳನ್ನು ಒಡ್ಡುತ್ತಾ ತನ್ನ ಬಲವನ್ನು ಸ್ಥಾಪಿಸಿಕೊಳ್ಳುತ್ತದೆ.

"ಸಾಂಸ್ಕೃತಿಕ ಪರಿಸರದಲ್ಲಿ ಯಜಮಾನದ ಪರಧಿಯ ಆಚೆ ಇರುವುದಿಲ್ಲ. ಬದಲಿಗೆ ಅದರ ರಕ್ಷೆಯೊಳಗೇ ಇರುತ್ತದೆ ಹಾಗೂ ಯಜಮಾನ್ಯವನ್ನು ಮುಂದುವರಿಸುವ ಪ್ರಮುಖ ಸಾಧನವೂ ಆಗಿರುತ್ತದೆ. ಹೀಗಾಗಿ ಯಜಮಾನ್ಯವನ್ನು ವಿರೋಧಿಸ ಬಯಸುವ ಪ್ರತಿರೋಧ ಶಕ್ತಿಗಳಿಗೂ ಈ ಸಾಂಸ್ಕೃತಿಕ ಪರಿಸರವನ್ನು ತಮ್ಮ ಅಧೀನಕ್ಕೆ ತೆಗೆದುಕೊಳ್ಳುವ ಅಗತ್ಯ ಅಭಿಲಾಷೆಗಳಿರುತ್ತದೆ. ಈ ನೆಲೆಯಲ್ಲಿ ಯಜಮಾನ್ಯ ಶಕ್ತಿಗಳು ಮತ್ತು ಅದರ ಪ್ರತಿರೋಧ ಶಕ್ತಿಗಳ ನಡುವಿನ ಸಂಘರ್ಷದ ಸ್ವರೂಪವನ್ನು ಸಾಹಿತ್ಯ ಪಠ್ಯಗಳ ಅಧ್ಯಯನದ ಮೂಲಕ ಗುರುತಿಸಬಹುದು. ಅಂತಹ ಒಂದು ಯಜಮಾನ್ಯ ಸಂಸ್ಕೃತಿಯ ಕಥನವನ್ನು ಗೀತಾರವರ ಕಾದಂಬರಿಗಳಲ್ಲಿ ಕಾಣುತ್ತೇವೆ. ಈ ಕಾದಂಬರಿಗಳಲ್ಲಿ ಶೋಧಿತವಾಗಿರುವುದು ಊಳಿಗಮಾನ್ಯ ಪದ್ಧತಿಯ ಜನಗಳಾದ ಗೌಡ, ಕುಲಕರ್ಣಿ, ಸಾವ್ಕರ, ಊರಿನ ಮುಖಂಡ, ಹಣವಿದ್ದ ಅಧಿಕಾರವಿದ್ದ ಜನಗಳ ದಬ್ಬಾಳಿಕೆ, ದೌರ್ಜನ್ಯ, ಕುತಂತ್ರ, ಆಮಿಷ ನಾನಾ ನಮೂನೆಯ ಹಿಂಸೆಗಳಲ್ಲಿ ಕೆಳಸ್ತರದ ಹೆಣ್ಣು ಶೋಷಣೆಗೀಡಾದದ್ದು ಕೆಳವರ್ಗದ ದಲಿತರು ಕುಡಿತ, ಜೂಜು ಲೈಂಗಿಕತೆಯೇ ಬದುಕೆಂದು ತಿಳಿದ ಅನಕ್ಷರಸ್ಥ ಜನರಲ್ಲಿ ಜೀವನದ ಎಲ್ಲಾ ಸಮಸ್ಯೆಗಳಿಗೆ ಹೆಣ್ಣು ಸಿಕ್ಕು ಬಳಲಿ ಬೆಂಡಾದದ್ದು ಕಾಣುತ್ತದೆ.

ಅಸ್ಪ್ರಶ್ಯತೆ, ಲೈಂಗಿಕತೆ, ಸ್ತ್ರೀ ಶೋಷಣೆ ಇವುಗಳಿಂದ ಸ್ಥಾಪಿಸಿರುವ ಯಜಮಾನ ಸಂಘರ್ಷವನ್ನು ಕಾದಂಬರಿಯಲ್ಲಿ ಕಾಣಬಹುದು. ಜಮದಾರ ಮಲ್ಲಪ್ಪ ದಲಿತರ ಕುಟುಂಬದಲ್ಲಿ ಹುಟ್ಟಿ ಕೆಳಗೇರಿಯ ದಲಿತರ ನಾಯಕನಾಗಿ ಬೆಳೆದು ಹಣಕಾಸು, ಹೊಲ, ಮನೆ, ಇವುಗಳಲ್ಲಿ ಗೌಡ, ಸಾವ್ಕಾರರಿಗೆ ಸಮಾನವಾಗಿ ನಿಲ್ಲುವಂತ ವ್ಯಕ್ತಿಯಾಗಿ, ಊರಿನ ಜನರಿಗೆ ಕಷ್ಟ-ಕಾಲದಲ್ಲಿ ಸಹಾಯ ಮಾಡುವ ಗುಣಗಳನ್ನು ಹೊಂದಿದ್ದ. ಇಷ್ಟೆಲ್ಲಾ ಹೊಂದಿದ್ದ ಮಲ್ಲಪ್ಪನ ಮಗಳು ಕಾಶಮ್ಮ ಸಾಹುಕಾರ ಗುರುಲಿಂಗಪ್ಪನ ಮಗ ಲಿಂಗರಾಜನನ್ನು ಪ್ರೀತಿಸುತ್ತಾಳೆ. ಲಿಂಗರಾಜ ಕಲ್ಬುರ್ಗಿ ಶಾಲೆಯಲ್ಲಿ ವಿದ್ಯೆ ಕಲಿತು ಬಂದವನು ಕೆಳಗೇರಿಯ ಕುಟುಂಬದ ಕಾಶಮ್ಮನನ್ನು ಪ್ರೀತಿಸಿ ಮದುವೆ ಆಗುವ ಮಟ್ಟಕ್ಕೆ ಬಂದದ್ದು ಊರಿನ ಜನರ ಕೆಂಗಣ್ಣಿಗೆ ಗುರಿಯಾಗುತ್ತಾರೆ. ಒಂದು ದಿನ ವಿಷಯ ತಿಳಿದ ಗುರುಲಿಂಗಪ್ಪ ಜಮಾದಾರ ಮಲ್ಲಪ್ಪನನ್ನು ಮನೆಗೆ ಕರೆಸಿ ಅವನಿಗೆ ಅವಮಾನವಾಗುವಂತೆ ನಡೆದುಕೊಳ್ಳುವುದನ್ನು ಈ ರೀತಿಯಾಗಿ ಕಾಣಬಹುದು.

"ಯಾಕಲೆ ಮಲ್ಲ್ಯಾ... ಸೊಕ್ಕ ಬಂದಾದೇನ್ಲೇ ಕಬ್ಬಲಿಗ್ಯಾ?" ನಿಮ್ಮವ್ವನ ಸೂಳ್ಯಾ ಮಗನೇ... ಕಡೀಗಿ ನಿಮ್ ಕಮಜಾತಿ ಹಲ್ಕಟ್ ಗುಣಾ ಎಲ್ಲಿ ಬಿಟ್ಟರೆಲೆ ನೀವು? ಏಟು ಸೊಕ್ಕಲೆ ಬೋಸಡಿ ಮಗನೇ ನಿನಗ..." (ಪು.೧೦೪) ಎಂದು ಸಾವ್ಕರ ಗುರುಲಿಂಗಪ್ಪ ಕೆಳಗೇರಿಯ ಹಿರಿಯ ಮನುಷ್ಯ ಎಂದು ಲೆಕ್ಕಿಸದೇ ಅವನನ್ನು ಜಾತಿ ನಿಂದನೆ ಮಾಡುತ್ತಾ ಬೈಯುತ್ತಾನೆ. ಏನು ತಿಳಿಯದ ಮಲ್ಲಪ್ಪ "ಯಾಕ್ರೀ ಸಾವ್ಕರಾ... ಏನಾಯ್ತುಂಬಾದು ಮದಲ ಹೇಳ್ರೀ.... ಹಿಂಗ್ ಸಿಕ್ಕಂಗೆಲ್ಲ ಬೈಯಲಕತ್ತರ ನನಗ್ಯಾಂಗ ತಿಳೀಬೇಕು ಹಿಂಗೆಲ್ಲಾ ಸುಮ್ಮ ಸುಮ್ಮನೆ ಕೆಟ್ಟ ಕೆಟ್ಟ ಬೈಗುಳ ಬಯ್ಯಾದು ನಿಮಗ ತರವಲ್ಲ... ನೀವು ಹತ್ತಂದದ್ದೂ ನಾನೂ ತಿರುಗಿ ಒಂದು! ಅಂದದ್ದೂ ಸರಿ ಆಗ್ತದ (ಪು.೧೦೪) ನನಗೂ ಅಭಿಮಾನ ಸ್ವಾಭಿಮಾನ ಇದೆ ಎಂದು ಹೇಳಿದನು. ನಯವಾಗಿ "ನಿನಗೇನೂ ಗೊತ್ತಿಲ್ಲಂತಿಯೇನೋ ಕಟಗಾ... ಹ್ಯಾಂಗ ಗೊತ್ತಾಗ್ತದೋ ನಿನಗ? ನಿನ್ ಮಗಳಿಗಿ ಚುಂಚೂರು ಮಾಪುರ ತಾಯಿಗಿ ಜೋಗಿಣಿ ಬಿಟ್ಟಿದ್ದೇನೋ ಮಲ್ಲ್ಯಾ? ಬಸವಿ ಬಿಟ್ಟಿಯೇನು? (ಪು.೧೦೫)ಎಂದು ಸಾವ್ಕರ ಗುರುಲಿಂಗಪ್ಪ ಕೇಳಿದನು ಇವನ ಮಾತುಗಳು ಮಲ್ಲಪ್ಪನಿಗೆ ಸಿಡಿಲಿನಂತೆ ನೆತ್ತಿಗಪ್ಪಳಿಸಿದುವು ಅವನೆದೆಯಲ್ಲಿ ರಕ್ತ ಕುದ್ದು ಉಕ್ಕಿದಂಗಾಯ್ತು.

ಮಲ್ಲಪ್ಪ ಸಾವ್ಕರನಿಗೆ "ಏನಂದ್ಯೋ ಸುಳ್ಯಾ ಮಗನೇ ಸಾವ್ಕರ... ನಿನ್ನ ನಾಲಿಗಿ ಸೀಳಿ ಹಾಕ್ತೀನಿ ಬೋಸಡೀಕೇ... ಸಾವ್ಕರಂತ ಮಾರ್ವಾದಿ ಕೊಟ್ಟರ ನನ್ ಕುಂಡ್ಯಾಗೇ ಬಿಸಿನೀರ ಬಿಡ್ಲಕ್ಕ ಹೊಂಟಿದ್ದ್ಯಾ... (ಪು. ೧೦೫) "ಎಂದು ಮಲ್ಲಪ್ಪ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡನು. ಸಾವ್ಕರನ ಆಳು ಮಗನೊಬ್ಬನು ನೋಡು ಮಲ್ಲಪ್ಪ... ನಿನ್ ಮಗಳು ಕಾಶಮ್ಮ ಮತ್ತ ಸಾವ್ಕರನ ಮಗ ಲಿಂಗರಾಜಾ ಇಬ್ರೂ ಕೈ ಕೈ ಹಿಡ್ಕೊಂಡು ಹಳ್ಳಿ ಸುತ್ತಮುತ್ತಿನ ಬನದಾಗ, ಅಡವ್ಯಾಗ, ಗುಡ್ಡದ್ಯಾಗ ತಿರಗ್ಯಾಡಲಕತ್ತಾರಂಬೋ ಸುದ್ದಿ ಬಂದಾದ ನೋಡ್ದವರೆಲ್ಲಾ ಹೇಳ್ಯಾರ ಲಿಂಗರಾಜಾಗ ಕರ್ಸಿ ಕೇಳದ್ರ ಅಂವಾ ನಿನ್ ಮಗಳಿಗೇ ಮದಿ ಮಾಡ್ಕೋತೀನಿ ಅಂತ ಹಟಾ ಹಿಡಿದಾನಂತ! (ಪು.೧೦೫) ಎಂದು ಹೇಳಿದನು ಈಗ ನೀನೆ ಹೇಳು "ಲಿಂಗರಾಜಯೇನೋ ಗಂಡಸಮಗಾ... ಹತ್ತು ಹೆಂಗಸರಿಗಿ ಮಗ್ಗಲದಾಗಿಟ್ಕೊಂಡು ಮಕ್ಕೋತಾನಂತ ತಿಳಿ. ಗಂಡಸರಿಗೇನೊ ಐಬಿಲ್ಲ! ಆದರ ನಿನ್ನ್ ಮಗಳು? ಆಕಿ ಹಿಂಗ್ ಅವನ ತೆಲಿಕೆಡ್ಸಿ ಇವನ ಜತಿ ಬೆದಗಿ ಬಂದ ಮಣಕದಂಗ ಬೆನ್ನಹತ್ತಿ ಓಡ್ಯಾಡ್ತಳಂದ್ರ ಯಾರ ಇಜ್ಜತ್ತು ಹರಾಜಾಗ್ತದ ಹೇಳು..." (ಪು.೧೦೫) ಅಂದನು ನಾವು ಈ ಮಾತಿನಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ. ಸಾವ್ಕರ ಗಂಡು ಮಕ್ಕಳಿಗೆ ಯಾವುದೇ ರೀತಿಯ ರೀತಿ ರಿವಾಜುಗಳು ಇರುವುದಿಲ್ಲ ಅವರು ಎಷ್ಟು ಹೆಂಗಸರನ್ನು ಬೇಕಾದರೂ ಹೊಂದಿರಬಹುದು. ಅವರಿಗೆ ಯಾವುದೇ

ಮಾನ ಮರುವಾದ್ಯೆಯ ಹಂಗು ಇರುವುದಿಲ್ಲ. ಅವರು ಎಷ್ಟೇ ಸ್ತ್ರೀಯರನ್ನು ತಮ್ಮ ಬಲೆಗೆ ಬಿಳಿಸಿಕೊಂಡರೂ ಅದು ಅವರ ಪ್ರತಿಷ್ಠೆಯಾಗಿರುತ್ತದೆ. ಅದರೆ ದಲಿತ ಹೆಣ್ಣುಮಗಳಾದ ಕಾಶಮ್ಮ ಲಿಂಗರಾಜನು ಮನಸಾರೆ ಪ್ರೀತಿಸಿ ಮದುವೆಯಾಗಬೇಕೆಂದು ಬಯಸಿದರೆ ಹೆಣ್ಣಾದವಳಿಗೆ ಮಾನ ಮರ್ಯಾದೆಯ ಪ್ರಶ್ನೆಯನ್ನು ಹಾಕುತ್ತಾರೆ. ಅವಳು ಲಿಂಗರಾಜನೊಂದಿಗೆ ತಿರುಗಾಡಿದರೆ ಅದನ್ನು ಪಶುಗಳಿಗೆ ಹೋಲಿಕೆ ಮಾಡುತ್ತಾರೆ. ಈ ರೀತಿಯಾಗಿ ಬೆದಿಗೆ ಬಂದ ಮಣಕದಂಗ ಎಂದು ಹೇಳಿ ಕೆಳಜಾತಿಯರ ಹೆಣ್ಣುಮಕ್ಕಳನ್ನು ಅವಮಾನಿಸುತ್ತಿರುವುದನ್ನು ಕಾಣಬಹುದು. ಈ ಹಳ್ಳಿಗಳಲ್ಲಿಯೇ ಆಗಲಿ ಪಟ್ಟಣಗಳಲ್ಲಿಯೇ ಆಗಲಿ ಕೆಳವರ್ಗದ ಸ್ತ್ರೀಯರನ್ನು ಯಾವ ಶ್ರೀಮಂತನಾಗಲಿ, ಸಾವ್ಕರನಾಗಲಿ, ಜಮೀನ್ದಾರನಾಗಲಿ, ಕುಲ್ಕರ್ಣಿಯೇ ಆಗಲಿ, ಮದುವೆಯಾಗಿ ಅವರನ್ನು ತಮ್ಮ ಧರ್ಮ ಪತ್ನಿಯೆಂದು ಸ್ವೀಕರಿಸುವುದಿಲ್ಲ ಬದಲಾಗಿ ರಾತ್ರಿಯಲ್ಲಿ ಅವರ ಮಗ್ಗಲುಗಳನ್ನು ಬಿಸಿಮಾಡಿಕೊಳ್ಳಲು ಬಳಸಿಕೊಳ್ಳುತ್ತಾರೆ.

ದಲಿತ ಹೆಣ್ಣು ಮಕ್ಕಳು ಶ್ರೀಮಂತ ಜಮೀನ್ದಾರರ, ರಂಡೆಯರಾಗಿ (ಸೂಳೆ) ಇಟ್ಟುಕೊಳ್ಳುತ್ತಾರೆಯೇ ವಿನಹಃ ಅವರನ್ನು ಕಟ್ಟಿಕೊಳ್ಳುವುದಿಲ್ಲ ಎನ್ನುವ ಮಾತನ್ನು ಕಾಶಮ್ಮನ ತಾಯಿ ಮಲ್ಲವ್ವಳಿಂದ ತಿಳಿಯಬಹುದು. ಮಲ್ಲವ್ವ ತನ್ನ ಮಗಳು ಸಾವ್ಕರನ ಮಗನ ಹಿಂದೆ ಬಿದ್ದು ತನ್ನ ಜೀವನಹಾಳು ಮಾಡಿಕೊಳ್ಳುತ್ತಿದ್ದಾಳೆಂದು ದ್ವನಿ ತೆಗೆದು ಅಳು ತೊಡಗಿದಳು ಇದನ್ನು ಕಂಡ ಕಾಶಮ್ಮ ಸೆಟೆದು ನಿಂತಳು "ನಾ ಯೇನೂ ಹಾದರಗಿತ್ತಿಯಲ್ಲ! ಲಿಂಗರಾಜಾ ನನಗೆ ಮದಿಮಾಡ್ಕೋತಿನೆಂತ ಭಾಷಾ ಕೊಟ್ಟಾನ... ನಾವಿಬ್ಬರೂ ಮದಿ ಮಾಡ್ಕೊಂಡು ದೂರ ದೇಶಾಂತ್ರ ಹೊಂಟೋಗ್ತಿವೆಂತ ನೀವೆಲ್ಲರೂ ಇಲ್ಲಿ ಸುಕವಾಗಿರ್ರಿ... ಎಂದು ಅವಳ ತಾಯಿಗೆ ಹೇಳುತ್ತಾಳೆ." (ಪು. ೧೧೦) ತನ್ನ ಮಗಳು ಮುಗ್ಧ ಈ ಸಾವ್ಕರಗೋಳ ವಿಷಯ ಅವಳಿಗೆ ತಿಳಿದಿಲ್ಲ ಎಂದು ಅವಳು "ಕೆಳ್ದೇನೊ ಆಕಿ ಮಾತೂ... ಅವರಿಬ್ರೂ ಮದಿ ಮಾಡ್ಕೋತಾರಂತೋ... ಸಾವ್ಕರನ ಮಗ ಎಲ್ಲೆರೆ ಇಕೀಗಿ ಮದಿಮಾಡ್ಕೊಂಡು ಹೆಣ್ತಿ ಅಂತ ಆಳ್ತಾನೇನೋ ಮಗಾ... ಇಕೀಗಿ ರಂಡಿ ಅಂತ ಇಟ್ಗೋತಾನಂವಾ.. ಈ ಹುಚ್ಚರಂಡೀಗಿ ತಿಳೆಂಗಿಲ್ಲಲೋ ಶಿವನೇ ಇಕಿ ಅವನ ಸೂಳಿ ಆಗ್ತಾಳೇನೋ ಮಗಾ... ಮಲ್ಲಪ್ಪ ಜಮಾದಾರ ಮಗಳು ಊರ ಸಾವ್ಕರನ ಮಗನ ಸೂಳಿ ಆಗ್ತಾಳೇನೋ ಫತರೂ..." (ಪು.೧೧೦) ಅಂತ ಅವಳು ಅಳುತ್ತಿದ್ದಳು ಅವಳು ಸಿಟ್ಟು ಸಂತಾಪದಿಂದ ಭೂಮಿಗೆ ಕುಸಿದು ನೆಲ ಸವರಾಡುತ್ತ ಬಿಕ್ಕಿ ಬಿಕ್ಕಿ ಮತ್ತೇ ಜೋರಾಗಿ ಅಳತೊಡಗಿದ್ದಳು. ಇವಳ ಮಾತಿನಿಂದ ಸಾವ್ಕರ ಮತ್ತು ಗೌಡ, ಕುಲಕರ್ಣಿಗಳು ಕೆಳಜಾತಿಯ ಹೆಣ್ಣು ಮಕ್ಕಳನ್ನು ಯಾವ ರೀತಿಯಿಂದ ನೋಡುತ್ತಿದ್ದರು ಎಂದು ತಿಳಿಯಬಹುದು. ಕೊನೆಗೂ ಕಾಶಮ್ಮ ಮಾರ್ತಾಂಡನನ್ನು

ಮದುವೆಯಾದರು ಲಿಂಗರಾಜ ಅವಳ ಒಗೆತನವನ್ನು ಅರಸಿಕೊಂಡು ಬಂದು ತನ್ನ ಊರ ಹೊರಗಿನ ತೋಟದ ಮನೆಯಲ್ಲಿ "ರೆಂಡೆ"ಯನ್ನಾಗಿ ಇಟ್ಟುಕೊಳ್ಳುತ್ತಾನೆಯೇ ವಿನಃ ಮದುವೆಯಾಗುವುದಿಲ್ಲ ಹೀಗೆ ಮಹಿಳೆ ಮೇಲ್ವರ್ಗದವರಿಂದ ಶೋಷಣೆಗೆ ಒಳಗಾಗುತ್ತಾರೆ. ಅದೇ ರೀತಿಯಾಗಿ ಈ ಸಾವ್ಕರ ಕುಲಕರ್ಣಿ, ಗೌಡ, ಪೂಜಾರಿ ಇಂತವರ ಕುತಂತ್ರದಿಂದ ಕೆಳಗೇರಿಯ ಹರೆಯದ ಪೊರಿ(ಹೆಣ್ಣುಮಕ್ಕಳು)ಗಳ ಆಸೆ ಆಕಾಂಕ್ಷೆಯನ್ನು ನುಚ್ಚು-ನೂರು ಮಾಡುತ್ತವೆ.

"ಮಲ್ಲಪ್ಪ ಜಮದಾರನ ಮನೆಯ ಆಳುಮಗನಾದ ಭರಮ್ಯಾನ ಮಗಳು ನೀಲವ್ವ ತಾನು ಪ್ರೀತಿಸಿದ ತುಕ್ಕಪ್ಪನನ್ನು ಪಡಿಯಲು ಆಗದೇ ತನಗೆ ಇಷ್ಟವಿಲ್ಲ ಎಂದರೂ ಕೇಳದೇ ತಂದೆ-ತಾಯಿ ಬಲವಂತವಾಗಿ ಆ ಚುಂಚೂರು ಮಾಪುರದೇವಿ ಸೇವಕ್ಕಾ ಜೋಗಣಿಯಾಗಿ ಬಿಡುತ್ತಾರೆ. ಅವಳಿಗೆ ಈ ಜೋಗಣಿಯ ಹೆಸರಿನಲ್ಲಿ ಸೂಳೆಯಾಗಿ ಬದುಕು ನಡೆಸಲು ಆಗದೇ ತಾನು ಬಾವಿಗೆ ಹಾರಿ ಆತ್ಮಹತ್ಯೆಯನ್ನು ಮಾಡಿ ಕೊಂಡಿರುವುದನ್ನು ಕಾಣಬಹುದು. ಇದನ್ನು ಕಂಡ ನೀಲವ್ವನ ತಾಯಿ ಮರಗೀ ಈ ರೀತಿಯಾಗಿ ತನ್ನ ವೇದನೆಯನ್ನು ವ್ಯಕ್ತಪಡಿಸುತ್ತಾಳೆ.

"ಹೆಂತಾ ಕೆಲ್ಸ ಮಾಡ್ದೇ ನನ್ ಮಗಳೇ... ನನ್ ಕಳ್ಳೀಗಿ ಬೆಂಕಿ ಹಚ್ಚಿ ಹ್ವಾದೆಲ್ಲೇ ಮಗಳೇ... ಹಡದ ಹೊಟ್ಟೀಗಿ ಚೂರಿ ಹಾಕ್ದೆಲ್ಲೇ ಕೂಸೂ... ನಿನಗ ಏಟರೇ ಜ್ವಾಕಿ ಜನತ ಮಾಡಿ ಬೆಳಸಿದ್ದನೆಲ್ಲೇ ನೀಲೂ... ನಿನ್ ಕೊದಲೇಳೀಗಿ ಧಕ್ಕಿ ಆಗಲಾರ್ದಂಗ ನೋಡ್ಕೊಂಡಿದ್ದನಲ್ಲೇ ಮಗಾ... 'ಹರಕಿ'ಗಾಗಿ ನಾ ಹ್ಯಾಂಗ ಅಡ್ಡ ಬರ್ಲೆಂತ ಸುಮ್ಮನಿದ್ದನೇಯವ್ವಾ... ಅವರು ನಿನಗ ಜೋಗಣಿ ಮಾಡಾ ಚಾಜಾಯೆಲ್ಲಾ ಮಾಡಾ ಮುಂದ ನಾ ದೂರ ಕುಂತೇ ಅತ್ತಿದ್ದನೇ ಕಂದಾ... ನಿನಗ ದೇವಿ ಸೇವಾಕ್ಕ ಬಿಡ್ಲೆಕ್ಕ ನನಗೇನೂ ಖುಷಿ ಇತ್ತೇನು ಮಗಳೇ... (ಪು.೬೧) ಇಲ್ಲಿ ನಾವು ತಾಯಿಯ ಸಂವೇದನೆಯನ್ನು ಕಾಣಬಹುದು. ತಂದೆ-ತಾಯಿಗಳುತಮ್ಮ ಮಗಳನ್ನು ಜೋಗಿಣಿ ಮಾಡಲು ಇಷ್ಟವಿಲ್ಲ ಎಂಬುದನ್ನು ಇದರಲ್ಲಿ ತಿಳಿಯಬಹುದು. ಆದರೆ, ಕುಲಕರ್ಣಿ, ಗೌಡ, ಸಾವ್ಕರ, ಪೂಜಾರಿಯವರ ಒತ್ತಡಕ್ಕೆ ಮತ್ತು ಮೂಢನಂಬಿಕೆಗಳ ಬಲೆಗೆ ಬಿದ್ದು ತಮ್ಮ ಹೆಣ್ಣು ಮಕ್ಕಳ ಜೀವನವನ್ನು ಹಾಳು ಮಾಡಿರುವುದನ್ನು ತೋರಿಸುತ್ತದೆ.

ಚನ್ನಬಸಪ್ಪಗೌಡ ಮತ್ತು ಮಾಪುರದೇವಿ ಪೂಜೆ ಮಾಡುವ ಪೂಜಾರಿ ಇಬ್ಬರೂ ಸೇರಿ ತುಳುಜಾ ಮತ್ತು ಹುಸೇನಪ್ಪರವರು ಮದುವೆಯಾಗಿರುವ ವಿಷಯವನ್ನು ಮಾತನಾಡಿಕೊಳ್ಳುತ್ತಿರುವಾಗ ಒಂದು ಹೆಣ್ಣನ್ನು ಅದು ಜೋಗಿಣಿಯಾದ ಕೆಳವರ್ಗದ ಸ್ತ್ರೀಯರನ್ನು ಯಾವ ದೃಷ್ಟಿಕೋನದಿಂದ ನೋಡುತ್ತಾರೆ ಎಂಬುದನ್ನು ಹೀಗೆ ಕಾಣಬಹುದಾಗಿದೆ. "ಆ ಜೋಗಣಿಗೆ ಮದಿ ಮಾಡ್ಕೊಂಡು ಗಂಡ ಆದಾಂವ?

ಜೋಗಣಿ ಕೊಳ್ಳಾಗ ತಾಳಿ ಕಟ್ಟಲಿಕ್ಕ ಅಂವಗೇನು ಬ್ಯಾರೆ ಹೆಣ್ಣುಗೋಳೆ ಸಿಕ್ಕಿಲೇನು? ಬಿಕನಾಸಿಗಿ ತಂದು ನಡುಮನ್ಯಾಗಿಟ್ಟರಂತ... ಹಂಗಾಯ್ತು ಅದ್ಯಾವಾದದು ಬುದ್ದಿಗೇಡಿ... ಹಳಸಿದ್ದಕ್ಕ ಹಸಿದಿದ್ದಕ್ಕ ಗಂಟು ಬಿದ್ದಾದ ಬಿಡು... (ಪು. ೨೧೨) ಇಲ್ಲಿ ತುಳಜಾ ಜೋಗಣಿ ಮತ್ತು ಕೆಳಜಾತಿಯವಳು ಎಂದು ತಿಳಿದರೂ ಸಹ ಹುಸೇನಪ್ಪ ತುಳಜಾಗೆ ಬಾಳನ್ನು ಕೊಟ್ಟಿರುವುದನ್ನು ಗೌಡನು ತುಳಜಾ ಕೆಟ್ಟು ಹೋಗಿರುವ ಹೆಣ್ಣು ಅವಳು ಹಸಿದಿರುವ ಹೆಣ್ಣು ಅವಳನ್ನು ಏಕೆ ಮದುವೆಯಾದ ಅವನಿಗೆ ಬೇರೆ ಹೆಂಗಸರೆ ಇರಲಿಲ್ಲವೇನು. ಎನ್ನುವಂತೆ ಪ್ರಶ್ನೆ ಮಾಡುತ್ತಾನೆ. ಗೌಡನಿಗೆ ಇಂತಹ ಹೆಣ್ಣು ಮಕ್ಕಳನ್ನು ನೋಡಿದರೆ. ಅಸಡ್ಯ, ಕೀಳುಭಾವನೆಯನ್ನು ಹೊಂದಿರುತ್ತಾನೆ. ಉಂಡು ಬಿಟ್ಟಿರುವ ಎಲೆಯನ್ನು ಬಿಸಾಕುವ ರೀತಿಯಲ್ಲಿ ಗೌಡರು ಕೆಳಜಾತಿಯ ಹೆಣ್ಣು ಮಕ್ಕಳನ್ನು ಬಳಸಿಕೊಂಡು ಬಿಸಾಕುತ್ತಾರೆ. ಇನ್ನೂ ಆ ಪೂಜಾರಪ್ಪನು ಇನ್ನೂ ವ್ಯವಸ್ಥೆಯ ವಿರುದ್ಧ ನಿಂತ ತುಳಜಾಗೆ ಈ ರೀತಿಯಾಗಿ ಬೈಯ್ಯುತ್ತಾನೆ ಅವಳ ಮೈಗೆ ದೊಡ್ಡರೋಗ ಬಂದು ಸಂಧಿ ಸಂಧಿಗೆಲ್ಲಾ ಹುಳಿಬಿದ್ದು ಸಾಯಬೇಕಾಗಿತ್ತು. ದೇವರಿಗೆ ಎದರಾಕಿಕೊಂಡು ನಿಂತ್ಯಾಕೆಗೆ ನೆತ್ತರ ಕಾರಕ್ಕೊಂಡು ಸಾಯಬೇಕಾಗಿತ್ತು ಎಂದು ತುಳಜಾ ಮೇಲೆ ಪೂಜಾರಪ್ಪ ಹರಿಹಾಯುತ್ತಾನೆ. ಗೌಡ ಮತ್ತು ಪೂಜಾರಿಯ ಒಳಸಂಚನ್ನು ಯಾವ ರೀತಿಯಾಗಿ ರೂಪಿಸಿಕೊಂಡು ಕೆಳವರ್ಗದ ಮುಗ್ಧ ಹೆಣ್ಣು ಮಕ್ಕಳ ಮೇಲೆ ಹೇಗೆ ತಮ್ಮ ಕುತಂತ್ರವನ್ನು ಆ ಮಹಿಳೆಯರ ಮೇಲೆ ಹೇರಲಾಗುತ್ತದೆ ಎಂಬುದನ್ನು ಈ ರೀತಿಯಲ್ಲಿ ವಿಶ್ಲೇಷಿಸಲಾಗಿದೆ.

ಗೌಡನು ಪೂಜಾರಿಗೆ "ನಿನ್ನ ಮೈಯಾಗ ದೇವರ ಬರ್ತಾದೇನು? ಹೊಲ ಮಾದರ ಕೇರ್ಯಾಗಿನ ಚಲುವಿನ ಪೋರಿಗೋಳಿಗಿ ಜೋಗಣಿ ಬಿಡು ಅಂತಾ ಕೇಳ್ತಾದೇನು ಆ ನಿನ್ನ ಗುಡ್ಯಾಗಿನ ಮಾಪುರತಾಯಿ ದೇವಿ? ಎಂದು ಕೇಳಿದ್ದಕ್ಕೆ ಪೂಜಾರಿಯು "ಹೆಂತಾ ಮಾತ್ರೀ ಗೋಡಾ... ಪಾಪ ಅದು ಏನೂ ಹೇಳಂಗಿಲ್ರೀ... ಯೆಲ್ಲಾ ನೀವೇ ಹೇಳ್ತಿರೆಲ್ಲ ಯಾ ಪೋರಿ ಮ್ಯಾಲರೆ ನಿಮ್ಮ ಮನಸ್ಸು ಬಿತ್ತಂದ್ರ ನೀವೇ ನನಗ ಕರ್ಸಿ ಹೇಳ್ತಿರೆಲ್ಲ ಸುಕರಾರ ದಿನ ಸೇಂದಿ ಕುಡ್ಸಿ ದೇವಿ ಸವಾರಿ ಬಂದಾದಂತೇಳಿ ನಿಮ್ಮ ಮಾತಗೋಳೆಲ್ಲಾ ಆ ಮಾಪುರೆವ್ವ ದೇವಿ ಹೇಳ್ಯಾಳಂತೇ ನಾ ನಮ್ಮಂದೀಗಿ ಹೇಳಕಿ ಮಾಡ್ತೀನಿ ಆಯ್ತು ಆ ಹೊಂಬ ಮಂದಿ ನನ್ ಮಾತಂದ್ರ ದೇವಿ ಮಾತಂತೇ ನಂಬ್ಕೋಂಡು ನಾವು ಹೇಳಿದಂಗ ಕೇಳ್ತಾರ... ಎಂದು ಹೇಳುತ್ತಾನೆ. (ಪು. ೨೧೩) ಹಳ್ಳಿ ಜನರ ಮುಗ್ಧ ಮನಸ್ಸುಗಳಿಗೆ ಮತ್ತು ಕೆಳವರ್ಗದ ಹೆಣ್ಣು ಮಕ್ಕಳಿಗೆ ಅಧಿಕಾರದ ಮತ್ತು ಧಾರ್ಮಿಕತೆಯ ಹೆಸರಿನಲ್ಲಿ ಅವರನ್ನು ಶೋಷಣೆ ಮಾಡುತ್ತಿದ್ದಾರೆ. ಹೀಗೆ ಧಾರ್ಮಿಕ ವಿಚಾರಗಳಲ್ಲಿ ಸಾಮರಸ್ಯ ಮತ್ತು ವೈರುಧ್ಯಗಳು ಸಮಾಜದಲ್ಲಿ ಜೊತೆ ಜೊತೆಯೇ ಸಾಗಿ ಬರುವ ಪ್ರಕ್ರಿಯೆ. ಧಾರ್ಮಿಕತೆಯನ್ನು ದುರುಪಯೋಗಪಡಿಸಿಕೊಂಡು ಮೇಲ್ವರ್ಗದ ಜನರು ತಮ್ಮ ಸ್ವಾರ್ಥಕ್ಕಾಗಿ ಕೆಳವರ್ಗದ ಹೆಣ್ಣುಮಕ್ಕಳನ್ನು ಬಲಿಪಶು ಮಾಡಿಕೊಳ್ಳುವ ಪ್ರಕ್ರಿಯೆಯನ್ನು

ಕಾಣುತ್ತವೆ. ಸಮಾಜದ ವಿರೋಧಿ ನೆಲೆಯಲ್ಲಿ ಜೋಗಿಣಿ ಪದ್ಧತಿಯು ಗಮನಾರ್ಹ ಅಂಶವಾಗಿದೆ. ಇದು ಧಾರ್ಮಿಕವಾಗಿ, ಸಾಮಾಜಿಕವಾಗಿ, ಅಮಾನವೀಯ ಆಚರಣೆಗಳನ್ನು ನೈತಿಕವಾಗಿ ಮಾನವೀಯ ನೆಲೆಯಲ್ಲಿ ಕಾದಂಬರಿಯಲ್ಲಿ ನೋಡಬಹುದಾಗಿದೆ.

ಸಮಾಜದ ಅನಿಷ್ಟ ಪದ್ಧತಿಗಳನ್ನು ಕೆಳಜಾತಿಯವರು ಮಾತ್ರ ಆಚರಣೆ ಮಾಡುತ್ತಿದ್ದರು ಕೆಳಜಾತಿಯವರು ದೇವಿಗೆ ಮಾಡಿಕೊಳ್ಳುವ ಹರಕೆ-ಕೋರಿಕೆಗಳು ಮೇಲ್ಜಾತಿಯವರಲ್ಲಿ ಇರಲಿಲ್ಲ. ಇವರು ಕೇವಲ ಪೂಜೆ-ನೈವೇದ್ಯಗಳನ್ನು ಮಾತ್ರ ಮಾಡಿಸುತ್ತಿದ್ದರು. ಪ್ರಾಣಿಬಲಿ ಕೊಡುವುದು ಜೋಗಿಣಿ ಬಿಡುವನೆಂದು ಹರಿಸಿಕೊಳ್ಳುವುದು. ಇವೆಲ್ಲಾ ಕೆಳವರ್ಗದವರ ಕೋರಿಕೆಗಳಾಗಿದ್ದವು. ಇದರಲ್ಲಿ ಮೇಲ್‌ವರ್ಗದವರ ಸ್ವಾರ್ಥಕ್ಕೆ ಕೆಳವರ್ಗದ ಹೆಣ್ಣು ಮಕ್ಕಳು ಬಲಿಯಾಗುತ್ತಾರೆ. ಅದನ್ನು ಈ ಕೆಳಗಿನಂತೆ ವಿಶ್ಲೇಷಿಸಬಹುದಾಗಿದೆ.

ಹೊಲೆಮಾದಿಗರ ಕುಲದೇವತೆಯಾದ ಚುಂಚೂರು ಮಾಪುರ ತಾಯಿ ದೇವಿಗೆ ಆ ಆಸುಪಾಸಿನ ಬಾಳೋಸು ಹಳ್ಳಿಯ ಈ ಮಂದಿ ಹಿಂದಿನ ತಮ್ಮ ಹಿರಿಯರು ನಡೆಸಿಕೊಂಡು ಬಂದಂತಹ ಈ ದೇವಿಯ ಭಕ್ತರಾಗಿ ತಲೆಮಾರಿನಿಂದ ಬಗೆ-ಬಗೆಯ ಹರಕೆ ಸಲ್ಲಿಸುತ್ತಾ ಬಂದಿದ್ದಾರೆ. ಗಂಧದ ಹುಟಗಿ ಅಂದರೆ ಬೆತ್ತಲೆ ಸೇವೆ, ಬೇವಿನ ಹುಟಗಿಗಳು ಮಾಮೂಲಿಯಾಗಿರುತ್ತಿದ್ದವು. ಮುಖ್ಯವಾದದ್ದೆಂದರೆ ದೇವಿಗೆ ಜೋಗಣಿ ಬಿಡುವ ರಿವಾಜು. ಹೆತ್ತವರ ಹರಕೆಗೆ ಹರೆಯದ ಹೆಣ್ಣುಮಕ್ಕಳು ಈ ರಿವಾಜಿನಿಂದಾಗಿ ದೇವಿ ಹೆಸರಿನ ಹಣೆಪಟ್ಟಿ ಹಚ್ಚಿಕೊಂಡು ಸೂಳೆಗಾರಿಕೆಗೆ ಇಳಿಯುತ್ತಾರೆ. ಇದರ ಮಜಾ ಮಾಡುವವರು ಮಾತ್ರ ಮೇಲು ವರ್ಗದ ಗೌಡರು, ಸಾವ್ಕರ, ಕುಲಕರ್ಣಿಗಳು, ಸಿರಿವಂತ ಗಂಡಸರೇ ಎಂಬುದನ್ನು ನಾವು ಮರೆಯುವಂತಿಲ್ಲ. ಇನ್ನೊಂದು ರೀತಿಯಲ್ಲಿ ನೋಡುವುದಾದರೆ, ಜೋಗಣಿಯವರನ್ನು ಒಂದು ರೀತಿಯಲ್ಲಿ ಮನೋರಂಜನೆಯ ವಸ್ತುವಾಗಿ ಅವರನ್ನು ಬಳಸಿಕೊಳ್ಳುತ್ತಿರುವುದನ್ನು ಸಹ ನೋಡಬಹುದಾಗಿದೆ.

"ನಮ್ಮ ಚುಂಚೂರು ದೇವಿ ಜಾತ್ರ್ಯಾಗ ಮೋಜು ಇರಾದೇ ಜೋಗಣೇರ ಹಾಡು ಕುಣಿತಗಳಿಂದ ಬಾರಾ ಹರದಾರಿ ದೂರದಿಂದ ಮಂದೆಲ್ಲಾ ಈ ಜಾತ್ರಿಗಿ ಬರಾದೇ ಜೋಗಣೇರ ಸಲ್ಯಾಕ(ಪು.೨೨೪) ಎಂಬ ಮಾತುಗಳನ್ನು ಕೇಳಬಹುದು. ರಾಜ ಮಹಾರಾಜರ ಆಸ್ಥಾನದಲ್ಲಿಯು ಕೂಡ ಜೋಗಣಿಯರನ್ನು ಹಾಡುವುದಕ್ಕೊ ನರ್ತಿಸುವುದಕ್ಕೊ ತಮ್ಮ ಲೈಂಗಿಕ ಕ್ರಿಯೆಗೆ ಸಹಾಯಕರಾಗಿ ಇಟ್ಟುಕೊಂಡಿರುವಂತಹ ಇತಿಹಾಸವನ್ನು ಕಾಣಬಹುದು. ಜೋಗಣಿಯರ ಮನಸ್ಸಿನ ನೋವು ವೇದನೆಗಳನ್ನು ಯಾರು ಕಾಣುವುದಿಲ್ಲ ಕೇವಲ ಅವಳನ್ನು ಭೋಗದ ವಸ್ತುವಾಗಿ, ಮನೋರಂಜನೆಯ ಒಂದು ಭಾಗವಾಗಿ ಕಾಣುತ್ತಿರುವುದನ್ನು ಇಲ್ಲಿ ಗುರುತಿಸಬಹುದು.

ಹಳ್ಳಿಯಂತಹ ವಾತಾವರಣದಲ್ಲಿ ಒಂಟಿ ಮಹಿಳೆಯರನ್ನು ಕಂಡರೆ ಕಾಮುಕರು ಅವಳ ಮೇಲೆ ಹೇಗೆ ಹೆರಗಲು ಮುಂದಾಗುತ್ತಾರೆ ಎಂಬುದನ್ನು ಕಾದಂಬರಿಯಲ್ಲಿ ಕಾಣಬಹುದು. ಕಲ್ಯಾಣಿ ಜೈಲಿಗೆ ಹೋದ ಮೇಲೆ ಬೆಳ್ಳಿಯು ಹೊಲದಲ್ಲಿ ಮನೆಯಲ್ಲಿ ಎತ್ತುಗಳ ಹಾಗೆ ದುಡಿದು ಜೀವನ ನಡೆಸುತ್ತಿದ್ದರೂ ಸಮಾಜದಲ್ಲಿ ಹೆಣ್ಣುಮಕ್ಕಳು ತಮ್ಮ ಪಾಡಿಗೆ ತಾವು ಜೀವನ ನಡೆಸುತ್ತಿದ್ದರೂ ಅವರನ್ನು ಸುಮ್ಮನೇ ಬಿಡುವುದಿಲ್ಲ. ಅದೇ ರೀತಿಯಾಗಿ ಊರಗೌಡನಾದ ಈರಪ್ಪಗಸೆಪ್ಪ "ಬೆಳ್ಳಿ... ನಿನ್‌ಗಂಡ ಚವರ್ದಾವಸ ಸಜಾ ಬೋಗಸಿ ವಾಪಸ್ಸು ಬರ ತನಕಾ ನೀ ಇಲ್ಲಿ ಮುದಕ್ಯಾಗಿ ಹೋಗ್ತಿ... ದುಡ್ದೊ ದುಡ್ದೊ ಮೈಯಾಗಿ ತಾಕತ್ತನೂ ಕರಗಿರ್ತಾದ... ನನ್ ಮಾತು ಕೇಳು... ಮತ್ತ ನನಗ ತಪ್ಪ ತಿಳ್ಕೋಬ್ಯಾಡ... ನೀ ಮನಸ ಮಾಡದ್ರ ನೀ ಹಿಂಗ್ ದುಡ್ಯಾದು ತಪ್ಪಸ್ತೀನಿ ನಾನು... ಚೆಲು ಹೆಂಗಸ್ರು ಹಿಂಗ್ ಅಡಿಗಿಡಾ ತಿರಗ್ಯಾಡಿ, ಹೊರಿ ಹೊತಗೊಂಡು ಬರಾದು ನೋಡದರೇ ನನ್ ಕಳ್ಳು ಚುರ್ರಂತಾದ... ನೀ ನನ್ ಮಾತ ಒಪಗೊಂಡ್ರ ಇದೆಲ್ಲಾ ಇರಂಗಿಲ್ಲ ನೋಡು. ನಿನ್ ಮನ್ಯಾಗೇ ಕುಂತು ನೀ ಆರಾಮ ಇರಬೌದು ನಮ್ಮ ಗೌಡ್ರ ಮನಿ ಹೆಂಗಸರಂಗ" "ನೀ ಒಪಗೊಂಡ್ರ ನಾ ರಾತ್ರಿ ನಿನ್ ಮನೀಗಿ ಬರ್ತಿನೆಂತ... ದಿನಾ ಅಲ್ಲ ಮತ್ತ, ಎಂಟ ದಿನಕ್ಕ ಹದುಂದಿನಕ್ಕ ರಾತ್ರಿ ಬಂದಿದ್ದು ಬೆಳಕ ಹರೆಟಗೆ ಹೊಳ್ಳಿ ಹೋಗ್ತಿನೆಂತ... ನಿನ್ ಮನೀಗಿ ಹತ್ತೋಟು ಖರ್ಚುಕೊಡ್ತೀನಿ ಈ ರೀತಿಯಾಗಿ ಬೆಳ್ಳಿಗೆ ಈರಪ್ಪಾಗಸೆಪ್ಪ ಗೌಡ ತನ್ನ ಅಧಿಕಾರದಿಂದ ಹೇಳುತ್ತಾನೆ. (ಪು. ೪೨೮) ಇಲ್ಲಿ ದಲಿತ ಹೆಣ್ಣಿನ ಶೋಷಣೆ ಈ ರೀತಿಯಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದಿರುವುದೇ ಆಗಿದೆ. ಬೆಳ್ಳಿಯು ಈರಪ್ಪಗಸೆಪ್ಪ ಗೌಡನ ಈ ಮಾತಿಗೆ "ಯಪ್ಪಗೌಗೋಡ... ನೀ ನೋಡ್ದರ ನಮ್ಮಪ್ಪ ಇದ್ದಂಗಿದ್ದೀ... ನಿನ್ನಂಥವನ ಬಾಯಿಲಿಂದ ಹಿಂತಾ ಮಾತು ಬರಬಾರ್ದು. ನನ್ನ ವಾರಗಿ ಮಗಳಾಳಲ್ಲ ನಿನಗ... ತೆಗಿ ಆಕಾಡಿ" (ಪು.೪೨೯) ಆತನ ಮಗಳ ಭಾವನೆಯಲ್ಲಿಯೇ ಅವನಿಗೆ ಉತ್ತರ ನೀಡುತ್ತಾಳೆ. ಇಲ್ಲಿ ಮೇಲ್‌ವರ್ಗದ ಶ್ರೀಮಂತ ಸಾವ್ಕಾರ, ಗೌಡರಿಗೆ ದಲಿತ ವರ್ಗದ ಹೆಣ್ಣು ಮಕ್ಕಳು ತಮ್ಮ ತಂಗಿ ಸಮಾನ, ಮಗಳ ಸಮಾನ, ತಾಯಿ ಸಮಾನ, ಎಂಬ ಭಾವನೆಯನ್ನು ಹೊಂದದೇ ಕೇವಲ ಲೈಂಗಿಕ ಭಾವನೆಯಿಂದ ಅವರನ್ನು ನೋಡುವ ದೃಷ್ಟಿಕೋನ ಮಾತ್ರ ಇವರದಾಗಿರುತ್ತದೆ.

ಬೆಳ್ಳಿಯ ಮನಸ್ಸು ಇಷ್ಟೆಲ್ಲಾ ಗಟ್ಟಿಮಾಡಿಕೊಂಡರು ಒಮ್ಮೊಮ್ಮೆ ಅವಳ ಮನಸ್ಸು ಮಾತು ಕೇಳದೆ ತಕರಾರು ತೆಗೆಯುತ್ತದೆ. ಅವಳ ವಿರುದ್ಧ ಬಂಡು ಸಾರುತ್ತದೆ "ಬೆನ್ನ ಹುರಿಗೆ ಬೆಂಕಿ ಚಡಪಡಿಸುತ್ತಾಳೆ. ಈ ರೀತಿಯಾ ವಿರಹ ಇದ್ದರೂ ಗೌಡನ ಮಾತಿಗೆ ಸೊಪ್ಪು ಹಾಕುವುದೇ ಇಲ್ಲ. ಇಲ್ಲಿ ಬೆಳ್ಳಿ ಗೌಡನೊಬ್ಬನಿಂದಲೇ ಶೋಷಣೆಗೆ ಒಳಗಾಗುತ್ತಿಲ್ಲ.

ಚುಂಚೂರು ಜೋಗಣಿ ಮರಗವ್ವಾನಿಂದಲೂ ಸಹ "ಏ ಬೆಳ್ಳೀ... ನಿನ್ನೋಟಕ್ಕ ನೀ ಬಾಳ ದೊಡ್ಡ ಪತಿವರತಿ ಅಂತ ತಿಳ್ಕೊಂಡಿದ್ದಿ ಏನಗ ಮಡಸ್ ಹೆಂಗಸಾ... ಈ ಗಂಡಸರು ಮನಸು ಮಾಡದರಂದ್ರ ಏನೂ ಬೇಕಾದರನೂ ಮಾಡ್ತಾರ... ತುಂಬಿದ ಸಭಾದಾಗ ಆದರುಪತಿ ಸೀರಿ ಕಳ್ದು ನಿಚಾ ಬತ್ತಲೆ ಮಾಡಾಮುಂದ ಆಕಿನ ಐದು ಮಂದಿ ಗಂಡದೇರುನೆಲ್ಲಾ ಬರೀತಿದ್ದರಂತ. ಸೀತಾದೇವಿಗಿ ಆ ರಾವಣ ಹೊತಗೊಂಡ್ಯೋಯ್ದಾಗ ಆಕಿನ ಗಂಡ ಹೆಂಗಸರು ಅತ್ತಂಗ ಅಳ್ತಿದ್ದನಂತ ಗೋಳೋ ಅಂತ... ಹಂತಾ ಪತಿವರತೇರ ಮುಂದ ನೀ ಏಟು ಕಿಮ್ಮತ್ತಿನ ಹೆಣ್ಣು? ನಾನೂ ನೋಡ್ತಿನೆಂತ... ಇದೇ ಊರಾಗಿನ ರಸ್ತಾದ ಮ್ಯಾಲಿಂದ ನಿನ್ ಸೆರಗಿಡದೆಳ್ಕೊಂಡು ನಿನಗ ಆ ಈರಪಾಗಸೆಪ್ಪ ಗೋಡಾನ ಮಂಚಕ್ಕೋಯ್ಲಿಲ್ಲಂದ್ರ ನಾ. ಚುಂಚೂರು ಜೋಗಣಿನೇ ಅಲ್ಲಂತ ತಿಳ್ಕೋ... ಎಂದು" (ಪು. ೪೫೦) ಬೆಳ್ಳಿಯ ಮೇಲೆ ಹಠ ಸಾಧಿಸುತ್ತಾಳಾದರೂ ಅದು ಸಾಧ್ಯವಾಗುವುದಿಲ್ಲ. ಇಲ್ಲಿ ಹೆಣ್ಣಿನ ಶೋಷಣೆ ಈ ರೀತಿ ನಡೆಯಲು ಕಾರಣವೆ ಎಂದರೇ ಯಜಮಾನಿಕೆಯ ಅಧಿಕಾರ, ಆರ್ಥಿಕತೆ ಮತ್ತು ಲಿಂಗದ ದೃಷ್ಟಿಯಿಂದ ನಮ್ಮ ಸಮಾಜ ನಡೆಸಿಕೊಳ್ಳುವ ರೀತಿ ನೀತಿಯೇ ಆಗಿದೆ.

ಲೈಂಗಿಕತೆಯನ್ನೇ ಮುಖ್ಯ ಕೇಂದ್ರವಾಗಿಟ್ಟುಕೊಂಡು ಎಲ್ಲಾ ರೀತಿಯ ಶೋಷಣೆಗಳನ್ನು ಈ ಸಮಾಜ ಮಾಡುತ್ತಿದೆ. ಪರ-ವಧುವನ್ನು ಬಯಸುವುದು ಹೊಸದಲ್ಲ ಆದರೆ ಬಲಿಪಶು ಮಾತ್ರ ಹೆಣ್ಣೆ. ಧರ್ಮದ ಹೆಸರಿನಲ್ಲಿ ದೈವದ ಹರಕೆಯಲ್ಲಿ ಹೆಣ್ಣುಮಕ್ಕಳನ್ನು ದೇವರಿಗೆ ಜೋಗಣಿಯರನ್ನಾಗಿ ಬಿಡುವ ಮೂಲಕ ಶೋಷಣೆಯನ್ನು ಮಾಡುವುದು ಇದರಲ್ಲಿದೆ.

"ಪೂಜಾರ" ಗಂಡಸರು ದೇವರನ್ನು ಸೃಷ್ಟಿಸುತ್ತಾರೆ. ಆ ದೇವರನ್ನು ಹೆಂಗಸರು ಪೂಜಿಸುತ್ತಾರೆ. ಮನುಸ್ಮೃತಿಕಾರ ಕ್ರಮಬದ್ದ ವಿವಾಹದ ಮೂಲಕ ಹೆಣ್ಣು ತನ್ನ ಮೂಲ ಲಕ್ಷಣಗಳನ್ನು ಕಳೆದುಕೊಳ್ಳುವಂತೆ ಸಾವಿನ ನಂತರ ಅವಳಿಗೆ ಸ್ವರ್ಗ ಪ್ರವೇಶ ಸಿಗುತ್ತದೆ ಎಂದು ಹೇಳಿದರೆ. 'ಎಕ್ಲಸಿಯಸ್ಸ್ ಹೆಣ್ಣು ಸಾವಿಗಿಂತಲೂ ಹೆಚ್ಚು ಕಹಿಯಾದವಳು ಅವಳೆದೆಯಲ್ಲಿ ಬಲೆಗಳಿವೆ. ಬೋನುಗಳಿವೆ. ಅವಳ ಕೈಗಳು ಕಟ್ಟುವ ಹಗ್ಗಗಳು ಇಂಥ ಗಂಡಸರು ಸಾವಿರದಲ್ಲೊಬ್ಬರಾದರೆ ನಾನು ನೋಡಿದ ಎಲ್ಲ ಹೆಂಗಸರೂ ಇಂಥವರೇ ಈ ರೀತಿ ತತ್ವಜ್ಞಾನಿಗಳು ಹಾಗೂ ಎಲ್ಲಾ ಧರ್ಮಗಳು ಹೆಣ್ಣನ್ನು ಶೋಷಣೆಗೆ ಒಳಗು ಮಾಡುವಂತವುಗಳೇ ಆಗಿವೆ. (ಸೌಮ್ಯ ಡಿ.ಕೆ. ೨೦೧೦ ಪು.೬೪, ಎಂ.ಫಿಲ್. ನಿಬಂಧ)

ಈ ಕಾದಂಬರಿಯಲ್ಲಿ ತುಳಜಾ ಮೇಲ್ವರ್ಗದವರ ಕುತಂತ್ರದಿಂದ ಜೋಗಣಿಯಾದರೂ ಅವಳು ಅದನ್ನು ತೆಜಸಿ ಹುಸೇನಪ್ಪನನ್ನು ಮದುವೆಯಾಗುತ್ತಾಳೆ.

ಇದರಿಂದ ಊರಿನ ಗೌಡ, ಪೂಜಾರಿ, ಸಾವ್ಕರ, ಕುಲ್ಕರ್ಣಿ, ಪಂಚಮರ ಕೆಂಗಣ್ಣಿಗೆ ಗುರಿಯಾಗುತ್ತಾಳೆ. ಈ ಮೇಲ್ವರ್ಗದವರು ಎಲ್ಲಾ ಜೋಗಣಿಯವರು ತುಳಜಾನಂಗೇ ಆಕಿನ ಹಾದಿ ತುಳಿಯುತ್ತಾರೆ. ಅಷ್ಟೊತ್ತಿಗೆ "ನಾಕೆಂಟೊರ್ಸಿನ್ಯಾಗ" ಈ ಜೋಗಣಿ ಬಿಡಾ ರಿವಾಜೇ ಮುಗಿದು ಹೋಗ್ತಾದ ನಮ್ಮ ಹಿರೇರು ನಡೆಸ್ಕೊಂಡು ಬಂದಿರಾ ಈ ರೀತಿ ರಿವಾಜುಗೋಳು, ಶಾಸ್ತ್ರಗೋಳು ಈಗ ನಮ್ಮ ಕಾಲಕ್ಕನಿಂದರಾದ್ರು, ನಾವು ನೋಡಂಗಿಲ್ಲ ಎಂದು ತುಳಜಾಗೆ ತಕ್ಕ ಪಾಠ ಕಲಿಸಬೇಕು ಎಂದು ಅವಳಿಗೆ ದಂಡ ಹಾಕುತ್ತಾರೆ. ಅವಳ ತಂದೆ–ತಾಯಿಗೆ ಊರಿಂದ ಬಹಿಷ್ಕಾರ ಹಾಕುತ್ತಾರೆ. ಮತ್ತೆ ಅವಳು ಜೋಗಣಿಯಾಗಿ ಊರಮಂದಿಗೆಲ್ಲಾ ಸೂಳೆಯಾಗಿ ತನ್ನ ದಂದೆ ಮುಂದುವರಿಸಬೇಕು ಎಂದು ತೀರ್ಮಾನ ಕೊಡುತ್ತಾರೆ.

ಈ ಜೋಗಣಿ ಪದ್ಧತಿ ಈ ರೀತಿ ನೆಲೆಯೂರಿರುವ ಕಾರಣ ಧರ್ಮದ ಮೂಲಭೂತವಾದಿತನ, ಪಟ್ಟಭದ್ರಾ ಹಿತಾಸಕ್ತಿಗಳ ಆಕ್ರಮಣ ಮತ್ತು ದೌರ್ಜನ್ಯ ಬಡತನ, ವಿವೇಚನಾ ಶಕ್ತಿಯ ಅಭಾವ ಮೂಢನಂಬಿಕೆಗಳು ದೇವರಿಗೆ ಅರ್ಪಣೆ ಮಾಡುವುದರಲ್ಲಿ ತೃಪ್ತಿ, ಶ್ರೀಮಂತರ ಹಾಗೂ ಮೇಲ್ವರ್ಗದ ರೀತಿ ರಿವಾಜುಗಳೇ ಕಾರಣವಾಗಿವೆ. ಸಾಮಾಜಿಕ ಸಮಸ್ಯೆಗಳ ಮಹಿಳೆಯ ಬದುಕಿನ ದಾರುಣತೆಯ ದಲಿತರ ಮೇಲೆ ನಡೆಯುವ ದೌರ್ಜನ್ಯಗಳು, ಧಾರ್ಮಿಕ ಸೋಗಲಾಡಿತನದ ವಿರುದ್ಧ ಅತ್ಯಂತ ವೈಚಾರಿಕವಾಗಿ ಪ್ರತಿಭಟನಾತ್ಮಕತೆಯನ್ನು ತಮ್ಮ ಕಾದಂಬರಿಗಳಲ್ಲಿ ಬಿಂಬಿಸಿದ್ದಾರೆ. ಜೊತೆಗೆ ವ್ಯವಸ್ಥೆಯನ್ನು ಮುರಿದು ಹೊರಗೆ ಬಂದರೂ ಮತ್ತೆ ಅದೇ ವ್ಯವಸ್ಥೆಯಲ್ಲಿಯೇ ಸಿಲುಕುವ ಪಾತ್ರಗಳನ್ನು ಕಾಣಬಹುದಾಗಿದೆ. ಶೋಷಣೆಯ ಸಮಗ್ರ ಪರಿಜ್ಞಾನವನ್ನು ಹೊಂದುವುದು ಅಂದರೆ ಸ್ತ್ರೀಯರು ಪುರುಷಶಾಹಿಯ ವಿರುದ್ಧ ಹೋರಾಟ ಮಾಡುವುದರ ಅವಶ್ಯಕತೆಯನ್ನು ಮನದಟ್ಟು ಮಾಡಿಕೊಡುವುದಕ್ಕೆ ಅಲ್ಲ ಸ್ತ್ರೀಯರ ಶೋಷಣೆಯನ್ನು ಪುರುಷರಿಂದ ಮಾಡಿಸುತ್ತ ಬಂದಿರುವ, ಹಾಗೂ ಪುರುಷರನ್ನು ಇನ್ನೊಂದು ಶ್ರೇಣಿಯಲ್ಲಿ ಶೋಷಣೆಗೊಳಪಡಿಸಿರುವ ವರ್ಗ ವ್ಯವಸ್ಥೆಯನ್ನು ಸ್ತ್ರೀಯರೂ ಪುರುಷರೂ ಜಂಟಿಯಾಗಿ ಹಾಗೂ ಸಾಮೂಹಿಕವಾಗಿ ಪ್ರಶ್ನಿಸುವಂತೆ ಕೊನೆಯಲ್ಲಿ ಕಿತ್ತೊಗೆಯುವಂತೆ ಸರಿಯಾದ ಮಾರ್ಗದರ್ಶನ ಗಳಿಸುವುದು. ಹೀಗೆ ಮಹಿಳೆಯರ ಮತ್ತು ದಲಿತರ ದಮನಕೊಳ್ಳಗಾದವರ ಕಥೆ ಜೊತೆಯಲ್ಲೇ ಬೆರೆತಿದೆ. ಈ ಇಬ್ಬರೂ ಮೀರಬೇಕಾದಂತಹ ಎರಡೂ ಆಯಾಮಗಳೆಂದರೆ

೧. "ವೈಧಿಕ ಹಿತಾಸಕ್ತಿ ಉತ್ಪಾದನಾ ವ್ಯವಸ್ಥೆಯ ವಾರಸುದಾರಿಕೆಯನ್ನು ಹೊತ್ತುಕೊಂಡಿರುವ ಯಜಮಾನ ಸಂಸ್ಕೃತಿ.

೨. ಯಜಮಾನ ಸಂಸ್ಕೃತಿಯನ್ನು ಉಸಿರಾಗಿಸಿಕೊಂಡಿರುವ ವ್ಯಕ್ತಿತ್ವ ಇವನ್ನು ಮೀರಿದಾಗ ಮಹಿಳೆಯರ ಮತ್ತು ದಲಿತರ ಬದುಕು ಸ್ವಲ್ಪ ಮಟ್ಟಿಗೆ ಬದಲಾವಣೆ ಯಾಗಬಹುದೆಂದು ಮಲ್ಲಿಕಾಘಂಟಿಯವರು ಹೇಳಿರುವುದನ್ನು ಕಾಣಬಹುದು." (ಸೌಮ್ಯ ಡಿ.ಕೆ. ೨೦೧೦, ಪು. ೬೪, ಎಂ.ಫಿಲ್. ನಿಬಂಧ)

೧೨ನೇ ಶತಮಾನದಲ್ಲಿ ರೆಮ್ಮವ್ವೆ ಹೇಳುವ ಹಾಗೆ ಎಲ್ಲ ಗಂಡಂದಿರು ಮೇಲೆ, ನನ್ನ ಗಂಡ ಕೆಳಗೆ ನಾ ಮೇಲೆ ಎಂದ ಪುರುಷ ಪ್ರಾಧಾನ್ಯತೆಯ ರಾಜಕಾರಣವನ್ನು ಪ್ರತಿನಿಧಿಸುವ ವೈಚಾರಿಕತೆಯ ಮಾತನ್ನು "ನಾನೇನಾದರೂ ಹೆಣ್ಣಾಗಿ ಹುಟ್ಟಿದರೆ ಹೆಣ್ಣನ್ನು ಆಟಿಕೆಯ ವಸ್ತು ಎಂದು ತಿಳಿದುಕೊಂಡ ಗಂಡಿನ ಮೇಲೆ ದಂಗೆಯನ್ನು ಹೊಡುತ್ತಿದೆ ಎಂದು ಅಂದೇ ಚಿಂತಿಸಿದ ಗಾಂಧೀಜಿಯವರ ಮಂತ್ರ ಇಂದಿನ ಮಹಿಳೆಯರ ಅಸ್ತ್ರವಾದರೂ ಸಹ ಜಾಗತೀಕರಣ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ 'ಸ್ತ್ರೀ'ಯನ್ನ ಆಧುನಿಕತೆಯಲ್ಲೂ ಹಿಂದಿಗಿಂತಲೂ ಹೆಚ್ಚಾಗಿ ಶೋಷಣೆಗೆ ಒಳಗಾಗುತ್ತಿದ್ದಾಳೆ." (ಸೌಮ್ಯ ಡಿ.ಕೆ. ೨೦೧೦, ಪು. ೬೪, ಎಂ.ಫಿಲ್. ನಿಬಂಧ)

ಶೋಷಣೆ ಎನ್ನುವುದು ಹೆಣ್ಣಿನ ಬದುಕಿನಲ್ಲಿ ಹೊಸದಲ್ಲವಾದರೂ ಅದರ ನೆಲೆ ಮತ್ತು ಮುಖಗಳು ಕಾಲದಿಂದ ಕಾಲಕ್ಕೆ ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಾ ಉಳಿಯುವ ಸಾಮಾಜಿಕ ಅಂಶಗಳೇ ಆಗಿವೆ. ಇಂತಹ ಶೋಷಣೆಗೆ ಕೊನೆಯೇ ಇಲ್ಲವೇ ಎಂದೆನಿಸುತ್ತದೆ. ಭಾರತೀಯ ಸಮಾಜದ ಆರ್ಥಿಕ ವ್ಯವಸ್ಥೆಯು ಮಹಿಳೆಯರನ್ನು ಬಹುರೂಪಿ ಶೋಷಣೆಯ ಬಲೆಯಲ್ಲಿ ಅತ್ಯಂತ ಸಂಕೀರ್ಣವಾಗಿ ಸಿಲುಕಿರುವ ಕಾರಣ ಎಲ್ಲರ ಸಮಸ್ಯೆಗಳನ್ನು ಒಂದೇ ತಕ್ಕಡಿಯಲ್ಲಿ ತೂಗಲಾಗದು. ಯಾವುದೇ ರೀತಿಯ ನಿರ್ವಚನ ತಾತ್ವಿಕ ನೆಲೆಗಳನ್ನು ಬಿಟ್ಟು ಲಿಂಗ ರಾಜಕಾರಣದ ಆಚೆಗಿರುವಂತಹ ಮಾನವೀಯ ತುಡಿತಗಳನ್ನು ಸಮಷ್ಟಿಯಾಗಿ ಗ್ರಹಿಸಿದಾಗ ಮಾತ್ರ ಇದು ಸಾಧ್ಯವಾಗುತ್ತದೆ.

**೪. ಮಹಿಳಾ ವಿರೋಧಿ ನೆಲೆಗಳು**

ಮದುವೆಯಾಗಲು ಮಾರ್ತಂಡ ಕಾಶಮ್ಮಳನ್ನು ನೋಡಲು ಬಂದಾಗ ಅವಳು ಅವನಿಗೆ ಒಪ್ಪಿಗೆಯಾಗುತ್ತಾಳೆ. ಅಂದರೆ, ಕಾಶಮ್ಮನಿಗೆ ಲಿಂಗರಾಜನ ನೆನಪು ನುಗ್ಗಿ ಬರುತ್ತಿತ್ತು. ಆದರೆ ಅವನ ಮದವಿ ಆಗಿದ್ದ ಸುದ್ಧಿಯನ್ನು ಫತರೂ ಹೇಳಿರುತ್ತಾನೆ. ಅದಕ್ಕೆ ಕಾಶಮ್ಮ "ಹೆಂತಾಘಾತ ಮಾಡ್ದ್ಯೋ ಲಿಂಗರಾಜಾ... ಪಿರೀತಿ ಅಂಬೋ ಹೆಸರಿಗೆ ಮಸಿ ಹಚ್ಚಿ ಬಿಟ್ಟಲ್ಲೋ ಮಾರಾಯಾ.. ನಾಯೇನು ನಿನಗೆ ಅನ್ಯಾಯ ಮಾಡಿದ್ದನಂತ ನೀ ನನಗ ಹಿಂಗ್ ಧೋಕಾ ಮಾಡ್ದ್ಯೋ ಲಿಂಗರಾಜಾ... (ಪು.೧೩೬) ಅಂತ ಆಂತರ್ಯ ದುಃಖ ಪಡುತ್ತಿರುತ್ತದೆ. ಕಾಶಮ್ಮ ಪ್ರೇಮ ವಿರಹವನ್ನು

ಅನುಭವಿಸುತ್ತಿರುತ್ತಾಳೆ. ಇದನ್ನು ಅವಳು ಯಾರ ಹತ್ತಿರವು ಹೇಳಿಕೊಳ್ಳುವ ಪರಿಸ್ಥಿತಿಯು ಇರಲಿಲ್ಲ. ಇಲ್ಲಿ ಹೆಣ್ಣಿನ ದುಃಖ ದುಮ್ಮಾನಗಳ ಸಂವೇದನೆಯನ್ನು ಗುರುತಿಸಬಹುದು.

ದುರ್ಗಿ ಮತ್ತು ಮುರುಗಿಯರು ಇವರು ಚುಂಚೂರಿನ ಮಾದರ ಕೇರಿಯ ಮಾನಿಂಗಪ್ಪನ ಅವಳಿ–ಜವಳಿ ಹೆಣ್ಣು–ಮಕ್ಕಳು, ಮಾನಿಂಗಪ್ಪ ಮಾಳವ್ವರಿಗೆ ಮದುವೆಯಾಗಿ ಬಾಳೂರ್ಸಾದರನೂ ಮಕ್ಕಳೇಯಾಗಿರಲಿಲ್ಲ. ಇವರ ಕುಲದೇವರಾದ ಚುಂಚೂರ ಮಾಪುರ ದೇವಿಗೆ ಮಕ್ಕಳಾಗಲೆಂದು ಹರಕೆ ಹೊತ್ತುಕೊಳ್ಳುತ್ತಾರೆ. ಅದರಲ್ಲಿ ಚೊಚ್ಚಲ ಹೆಣ್ಣಾದ್ರ ತಾಯಿ ಸೇವಾಕ್ಕ ಜೋಗಿಣಿ ಬಿಡ್ತೀವಿ ಅಂತ ಮತ್ತು ಗಂಡು ಮಗಾ ಹುಟ್ಟಿದ್ರ ನಮಗಿರ್ಲಿ ಅಂತ ಕೇಳೋದಿರಂತ ಇವರಿಗೆ ಮೊದಲಿಗೆ ಅವಳಿ–ಜವಳಿ ಎರಡು ಹೆಣ್ಣು ಮಕ್ಕಳಾಗಿದ್ದರಿಂದ ಅವರೇ ದುರ್ಗಿ ಮರ್ಗಿ ಅಂತ ಹೆಸರಿಟ್ಟರು ಮುಂದೆ ಅವರು ಬೆಳೆದು ದೊಡ್ಡವರಾಗಿ ಮೈನೆರದಾಗೊಮ್ಮೆ ಸಮಸ್ಯೆ ಹುಟ್ಟಿತು. ದೇವಿಯ ಹರಕೆಗಾಗಿ ಚೊಚ್ಚಿಲ್ನ ಹೆಣ್ಣು ಮಗಳನ್ನು ಜೋಗಣಿ ಬಿಡೋದು ಅಂತ ಬೇಡಿಕೊಂಡಿದರಲ್ಲ ಈ ವಿಚಾರವನ್ನು ಕೇರಿ ಪಂಚರ ಮುಂದೆ ಇಟ್ಟರು ಆಗ ಅವರು "ಎಡ್ಡೂ ಮಕ್ಕಳು ಚೊಚ್ಚಿಲ ಮಕ್ಕಳೇ... ಇಬ್ಬರಿಗೂ ದೇವಿ ಸೇವಾಕ್ಕ ಜೋಗಣಿ ಬಿಡ್ಬೇಕು" ಅಂತ ದೈವದವರು ನ್ಯಾಯ ನೀಡಿದರು. ಅವರ ತಂದೆ ತಾಯಿಗಳು ಆಯಿತು. ದೈವದವರೇ ಖರೀ ಫೈಸಲಾ... ದೂಸರಾ ಮಾತಿಲ್ಲ" ಆ ಮಕ್ಕಳು ಮೈ ನೆರೆದ ಮುಂದಿನ ವರ್ಸಿನ ಮಾಪುರ ತಾಯಿ ಜಾತ್ರೆಲ್ಲಿ ಅವರಿಗೆ ರೀತಿ ರಿವಾಜಿನಂತೆ ದೇವರಿಗೆ ಜೋಗವ್ವಗಳಾಗಿ ಬಿಡಲಾಗುತ್ತದೆ. (ಪು.೨೦೧)

ಈ "ಚುಂಚೂರಿನ ಹೊಲಗೇರಿ, ಮಾದರಕೇರಿಯಲ್ಲಿ ಇದು ಅವರ ಹಿಂದಿನ ಬಾಳೋಸು ತಲೆಮಾರಿನಿಂದ ಈ ಪದ್ಧತಿ ಬೆಳ್ಕೊಂಡು ಬಂದಿತ್ತು. ಯಾರು ಇಂತ ರೀತಿ ರಿವಾಜು ಹುಟ್ಟು ಹಾಕಿದರೋ, ಯಾಕೆ ಜಾರಿಗೆ ತಂದಿದ್ದರೋ ಎಂಬುದರ ಬಗ್ಗೆ ಈ ಮಂದಿ ಎಂದೂ ತಲೆಕೆಡಿಸಿಕೊಂಡವರೇ ಅಲ್ಲ. ತಮ್ಮ ಮಕ್ಕಳನ್ನು ದೇವಿಯ ಹೆಸರಿನ ಮೇಲೆ ತಾವೇ ಖುದ್ದು ನಿಂತು ಗಂಡಸರ ಮಗ್ಗುಲಿಗೆ ಕಳಿಸಿ ಸೂಳೆಗಾರಿಕೆ ದಂಧೆಗೆ ಇಳಿಸುತ್ತಿದ್ದರು ಹೀಗೆ ಓಮ್ಮೆ ಜೋಗಣಿ ಅಂತ ಆದವಳು ಸಾಯುವವರೆಗೂ ಜೋಗಿಣಿ ಆಗಿಯೇ ಉಳಿಯಬೇಕು ಮದುವೆಯಾಗುವಂತಿಲ್ಲ. ಅವಳಿಗೆ ಹುಟ್ಟುವ ಮಕ್ಕಳಿಗೆ ತಂದೆಯ ಹೆಸರು ಸಿಗುವುದಿಲ್ಲ ಅವರಿಗೆ ತಾಯಿಯೊಬ್ಬಳೇ ನಿಜ. ತಂದೆಯ ಅರಿವಿಲ್ಲ ಗುರುತಿಲ್ಲ." ಹೀಗೆ ಜೋಗಣಿಯರು ತಮ್ಮ ಹೊಟ್ಟೆ ತುಂಬಿಸಿಕೊಳ್ಳಲು ಪರಡಿಕೆ ಮತ್ತು ಚೌಡಕಿ ಭಾರಸ್ತೋತ ಮಾಪುರ ತಾಯಿಯ ಮಹಿಮಾದ ಹಾಡುಗಳನ್ನು ಹಾಡುತ್ತ ಭಿಕ್ಷೆ ಬೇಡುತ್ತಾ ಅವರನ್ನು ಯಾರು ಕರೆಯುತ್ತಾರೆಯೋ ಆ ಗಂಡಸರ ಮಗ್ಗಲು ಬಿಸಿ ಮಾಡುತ್ತ ಜೀವನ ನಡೆಸುತ್ತಾರೆ. ಒಮ್ಮೆ ದುರ್ಗಿ ಮತ್ತು ಮರ್ಗಿ

ಕಲ್ಲಪ್ಪನ ಸಿಂದಿ ದುಖಾನ್ಯಗ ಚೌಡಕಿ ಭಾರಸ್ಗೋತ ಚುಂಚೂರು ಮಾಪುರ ತಾಯಿಯ ಹಾಡನ್ನು ಹೀಗೆ ಹಾಡಿದರು.

"ಬನ್ನಿಗಿಡದ ಮಾಪುರಿ

ಬಯಲಾಗ ನಿನ್ ಜಾತರೀ

ಬಯಲಾಗ ನಿನ್ ಜಾತರಿ

ಊರುಬಿಟ್ಟು ಹರದಾರಿ... ಬನ್ನಿ ಗಿಡದ ಮಾಪುರೀ...

ನಾನಂಬೋ ಗಂಡಸಿನ

ಮೀಸಿ ನೀ ಬೊಳಸಿದೀ

ಕವಡಿ ಸರ ಕೊಳ್ಳಾಗ ಕಟ್ಟಿ

ರೇಸಮಿ ಸೀರಿ ಉಡಸಿದೀ... ಬನ್ನಿ ಗಿಡದ ಮಾಪುರೀ...

ಜೋಗಣಿ ಅಂತ ಬೈದವರ ಬಾಯಾಗ ಹುಳ ಬೀಳಸಿದೀ

ನೆತ್ತಿ ಮ್ಯಾಲ ಪರಡಿ ಹೊರಸಿ

ಗಲ್ಲಿ ಗಲ್ಲಿ ತಿರಿಗಿಸಿದೀ... ಬನ್ನಿ ಗಿಡದ ಮಾಪುರೀ...

ಗಂಡು ನಾ ಅಂದವನ

ಚೆಂಡು ಮುಂಡಾಡಿದೀ

ಗಂಡಸುತನಕ ಬೆಂಕಿಯಿಟ್ಟು

ಕೈಗಿ ಬಳಿ ತೊಡಸಿದೀ... ಬನ್ನಿ ಗಿಡದ ಮಾಪುರೀ...

ಚುಂಚೂರು ಮಾಪುರ ತಾಯಿ

ತುಳಜಾಪುರದ ತುಕ್ಕುಬಾಯಿ

ಸವದತ್ತಿ ಎಲ್ಲಮ್ಮ ಹೆಸರು ಬ್ಯಾರೆ

ಯೆಲ್ಲಾ ನೀನೇ ಮಾಯಾಕಾರತೀ.... ಬನ್ನಿ ಗಿಡದ ಮಾಪುರೀ...

ಕರುಣಾದ ಕಣ್ಣಿನಕ್ಕಿ ಕಮಲದಾ ಕೈಯಕ್ಕಿ

ನಂಬಿ ಬಂದ ಭಗತರಿಗಿ ನೆಳ್ಳಾಗಿ ನಿಂತಕ್ಕಿ

ನಿನ್ ಮೈಮಾ ನಾ ಯೇನು ಹಾಡೆಲೆವ್ವ

ಉಧೋ... ಉಧೋ...ಮಾಪುರೆವ್ವ... ಬನ್ನಿ ಗಿಡದ ಮಾಪುರೀ..." ಪು. ೨೦೨

ಎಂದು ಹಾಡುತ್ತಿರುವಾಗ ನೆರೆದಿದ್ದ ಮಂದಿಯೆಲ್ಲ ಅವರ ಗಂಟಲಿನ ದನಿಯೇ ಗಂಡಸರ ತಲೆಗೆ ನಿಶಾ ಏರಿಸುವಂತದ್ದು ಎಂದು ಅವರ ಮೈಯಾ ಮಾಟಗಳನ್ನು ವರ್ಣಿಸುತ್ತಾರೆ.

"ಹುವ್ವಿನಂಥಾ ಗಲ್ಲದಕ್ಕಿ

ಹಿಡಕಿ ತುಂಬೋ ಮಲಿಯಕ್ಕಿ

ಕಣ್ಣಿನಿಂದೇ ಕರೀತಾಳಲ್ಲೋ

ಪೋರಿ ಸಣ್ಣ ಟೊಂಕದಕ್ಕೀ" (ಪು. ೨೦೪)

ಎಂದು ಮಂದೆಲ್ಲ ಹೋ ಅಂತ ಕ್ಯಾಕಿ ಹೊಡೆದು, ಚಪ್ಪಾಳೆ ತಟ್ಟಿ ನಗ ತೊಡಗಿದರು. ಹೀಗೆ ಜೋಗಿಣಿಯರನ್ನು ಕೆಳವರ್ಗದ ಸ್ತ್ರೀಯರನ್ನು ಅವರ ದೇಹದಿಂದಲೇ ಅವರನ್ನು ಅಳೆಯುತ್ತಾರೆಯೇ ವಿನಃ ಅವರ ಮನಸ್ಸಿನ ನೋವು ದುಃಖಗಳನ್ನು ಯಾರು ಅರ್ಥ ಮಾಡಿಕೊಳ್ಳುವುದಿಲ್ಲವೆಂಬುದನ್ನು ಜೋಗಣಿಯರ ಮಾತಿನಲ್ಲಿ ಕೇಳಬಹುದು. ಜೋಗಣಿಯಾಗಿದ್ದ ತುಳುಜಾ ಪೂಜಾರಿಯಪ್ಪನನ್ನು ಈ ರೀತಿಯಾಗಿ ಕೇಳುತ್ತಾಳೆ.

"ಏ ಪೂಜಾರೀ ಮುತ್ತ್ಯಾ... ನೀ ಮಾಡಿದ್ದ ಜೋಗಣೇರ ಹಣೇಬರ ಏನಾಗ್ಯಾದಂ ಬಾದು ನಿನಗೇ ಗೊತ್ತದಾನೋ ಪೂಜಾರೀ... ಆ ಜೋಗಣಿ ಮಲ್ಲಕವ್ವಗ ಮೈಯೆಲ್ಲಾ ಹುಣ್ಣು ಬಿದ್ದು ದಿನಾ ಬೆಳಗಾದರ ನಿನ್ನ ಮ್ಯಾಲ ಹಿಡಿ ಸರಾಪ ಹಾಕಿ ಬೈಯ್ಕೋತ ಅಳತಾಳ... ಆ ಜೋಗಣಿ ಗೋರವ್ವ ಮುದಕ್ಯಾಗಿ ಲಕ್ವಾ ಹೊಡೆದು ಬಿದ್ದಾಳ; ಆಕೀಗಿ ಯಾರೂ ನೋಡ್ಕೊಳ್ಳೊವರಿಲ್ಲ... ಆಕಿಗಿನೂ ಗಂಡ ಮಕ್ಕಳು ಅಂತಿದ್ದರ ಆಕಿನ ಗತಿ ಹಿಂಗಾಗ್ತಿತ್ತಾ? ನಮ್ಮೂರ ಬೂದೆವ್ವಂತೂ ಊರ ಗಂಡಸರೆಲ್ಲಾ ಆಕಿನ ಹಾಸಗ್ಯಾಗ ಬಿಟ್ಟುಹ್ವಾದ ಬ್ಯಾನಿಯೆಲ್ಲಾ ಮೈಗಿ ಹತ್ತಿ ಯಾ ಡಾಕಟರು ಆಕಿನ ಇಲಾಜ ಮಾಡ್ಲಕ್ಕ ಮುಂದ ಬಂದಿಲ್ಲಂತಂಬಾದು ನಿನಗ ಗೊತ್ತಿಲ್ಲಾ? ಈ ಎಲ್ಲಾ ಜೋಗಣೇರ ಹಣೇ ಬರೇನಾಗ್ಯದ ನೋಡು... ಮುದಿ ಜೋಗಣೇರೆಲ್ಲಾ ಇಕಾಡಿ ಗಿರಾಕಿಗೋಳಿಲ್ದೆ ಆಕಾಡಿ ಬಿಕ್ಕಿ ಬೇಡದರ ಹಿಟ್ಟು, ಅಕ್ಕಿನೂ ಸಿಗಲಾರ್ದೆ ಉಪವಾಸ ವನವಾಸ ಸಾಯ್ಲಿಕತ್ತಾರ ಕೇಳು ಆ ಜೋಗಣೇರಿಗಿ... ಅವರ ಹಾಲತ್ತು ಏನಾಗ್ಯಾದಂಬಾದು ತಿಳೀತಾದ ನಿನಗ..." (ಪು. ೨೨೩) ತುಳುಜಾ ಪೂಜಾರಿಯನ್ನು ತರಾಟೆಗೆ ತೆಗೆದುಕೊಳ್ಳುತ್ತಾಳೆ. ಈ ಪೂಜಾರೆಪ್ಪ

ಗೌಡರು, ಸಾವ್ಕರರು ಕೊಡುವ ಎಂಜಲು ಕಾಸಿಗೆ ಆಸೆ ಬಿದ್ದು ಕೆಳಗೇರಿಯ ಮಂದಿಗೆ ದೇವರುಗಳು ಹರಕೆಗಳು ಎಂದು ಹೆದರಿಸಿ ಅವರ ಮಕ್ಕಳನ್ನು ಆ ಚುಂಚೂರು ಮಾಪುರ ದೇವಿ ಸೇವಕ್ಕ ಬಿಡಿರಿ ಎಂದು ಹೇಳಿ ಹರೆಯದಲ್ಲಿ ಎಷ್ಟು ಆಸೆ ಆಕಾಂಕ್ಷೆಗಳನ್ನು ಕನಸು ಕಂಡಂತಹ ಹೆಣ್ಣುಮಕ್ಕಳ ಜೀವನವನ್ನು ಹಾಳು ಮಾಡುತ್ತಿರುವುದನ್ನು ತೋರಿಸುತ್ತದೆ.

ಜೋಗಣಿಯಾಗಿ ದೇವರಿಗೆ ಮೀಸಲಿರುವ ಮಹಿಳೆಯರ ಸಂವೇದನೆಯ ನೆಲೆಗಳನ್ನು ಗುರುತಿಸಬಹುದು. ತಮ್ಮ ದೇಹದಲ್ಲಿ ಶಕ್ತಿ ಮತ್ತು ಸೌಂದರ್ಯ (ಹರೆಯ) ಇರುವವರೆಗೂ ಮಾತ್ರ ಅವರು ಹೇಗೊ ಬದುಕುತ್ತಾರೆ. ಆದರೆ ಅವರ ಹರೆಯ ಮುಗಿದು ಮುಪ್ಪಿನ ಕಾಲದಲ್ಲಿ ಅವರಿಗೆ ತುತ್ತು ಅನ್ನ ಸಹ ಯಾರೂ ಹಾಕಲು ಮುಂದೆ ಬರುವುದಿಲ್ಲ. ಅವರ ವೈಜ್ಞಾನಿಕ ಲೈಂಗಿಕ ರೀತಿಯಿಂದ ಅವರಿಗೆ ಮುಪ್ಪಿನ ಕಾಲಕ್ಕಾಗಲೇ ಅದು ಎಷ್ಟೋ ರೀತಿಯ ಕಾಯಿಲೆಗಳಿಗೆ ತಮ್ಮ ದೇಹವನ್ನು ಮನೆಯಾಗಿಸಿಕೊಂಡಿರುತ್ತಾರೆ. ಇವರಿಗೆ ಯಾವುದೇ ಗಂಡಸು ಆಗಲಿ ವೈದ್ಯಕೀಯ ಖರ್ಚನ್ನು ನೀಡದೇ ಅವರನ್ನು ಬೀದಿ ಹೆಣವಾಗಿ ಸಾಯುವಂತಹ ಪರಿಸ್ಥಿತಿಗೆ ಈ ಜೋಗಿಣಿ ಪದ್ಧತಿ ತಂದು ನಿಲ್ಲಿಸುತ್ತದೆ.

ಈ ಜೋಗಿಣಿಯವರು ಮಾಪುರ ದೇವಿ ಜಾತ್ರೆಯೊಳಗೆ ದೇವರಿಗೆ ಮಾಡುವಂತಹ ಸಲ್ಲಿಸುವಂತಹ ಹರಕೆಗಳಿಂದ ಅರೆಬೆತ್ತಲೆ ಸೇವೆ ಗಂಧದ ಹುಟಗಿ, ಬೇವಿನ ಹುಟಗಿ ಇವುಗಳನ್ನು ನೋಡುವುದಕ್ಕಾಗಿಯೇ ಸುತ್ತಮುತ್ತಲಿನ ಹರೆಯದ ಗಂಡಸರೆಲ್ಲರೂ ಬರುತ್ತಿರುತ್ತಾರೆ ಒಂದು ಕಡೆ ಊರಿನ ಪಂಚರು ಈ ರೀತಿಯಾಗಿ ಹೇಳುತ್ತಾರೆ. "ನಮ್ಮ ಚುಂಚೂರು ದೇವಿ ಜಾತ್ರ್ಯಾಗ ಮೋಜು ಇರಾದೇ ಜೋಗಣೇರ ಹಾಡು ಕುಣಿತಾಗಳಿಂದ, ಬಾರಾ ಹರದಾರಿ ದೂರದಿಂದ ಮಂದೆಲ್ಲಾ ಈ ಜಾತ್ರಿಗೆ ಬರಾದೇ ಜೋಗೇಣೆರ ಸಲ್ಯಾಕ" ಎಂದು ಜೋಗಣೆಯರನ್ನು ಮನೋರಂಜನೆಯ ಕೇಂದ್ರವಾಗಿ ಮತ್ತು ಲೈಂಗಿಕ ದೃಷ್ಟಿಯಿಂದ ಮಾತ್ರ ಕಾಣುತ್ತಾರೆ. ಅದರಲ್ಲಿಯೂ ಆ ಜಾತ್ರೆಗೆ ಬಂದಿರುವಂತಹ ಜೋಗಿಣಿಯವರು ಯಾರು ಬಹಳ ಸುಂದರವಾಗಿದ್ದಾರೆ ಯಾರು ಮೈಕಟ್ಟಿನಿಂದ ಇದ್ದಾರೆ ಎಂದು ಅವರ ಮೈಯನ್ನು ರೊಮ್ಯಾಂಟಿಕ್ ಆಗಿ ವರ್ಣಿಸುತ್ತಾರೆ. ಅಲ್ಲಿ ಒಂದು ರೀತಿಯ ಲೈಂಗಿಕ ಕ್ರಿಯೆ ಕೇಂದ್ರ ಬಿಂದುವಾಗಿರುತ್ತದೆ ಅದನ್ನು ಈ ರೀತಿಯಾಗಿ ಕಾಣಬಹುದು.

"ಸಿಂದಿ ದುಕಾನಿನ ಅಂಗಳದಂಥ ಬಯಲಿನಲ್ಲಿ ಬೇವಿನ ಮರದ ನೆಳ್ಳಿನಲ್ಲಿ ಜೋಗಿಣೆಯರ ಗುಂಪು ಕುಂತಿತ್ತು. ಸುತ್ತ ಗಂಡಸರು ನಖರಿ, ಚಕರಿ ಆಡುತ್ತ, ನಗುತ್ತಿದ್ದರು ರಾತ್ರಿ ಯಾವ್ಯಾವ ಜೋಗಣಿಯ ಹಾಸಿಗೆಗೆ ಹೋಗಬೇಕು ಅಂತೆಲ್ಲ ಲೆಕ್ಕ

ಹಾಕುತ್ತ ಜೋಗಣಿಯರ ಅಂದ ಚಂದದ ಅಂದಾಜು ಹಾಕುತ್ತಿದ್ದರು. ಅವರ ಮೈಕಟ್ಟಿನ ಹರೆಯದ ಸೊಕ್ಕು ನಖರಾಗಳನ್ನು ಕಣ್ಣುಗಳಿಂದಲೇ ಅಳಿಯುತ್ತಿದ್ದರು. ಎನ್ನುವ ಮಾತಿನಲ್ಲಿ ಪುರುಷರ ಅಭಿಲಾಷೆಯನ್ನು ತಿಳಿಯಬಹುದಾಗಿದೆ. ಭಾರತೀಯ ಜಾತಿ ವ್ಯವಸ್ಥೆ ಲಿಂಗ ಸಂಬಂಧ ಮತ್ತು ತಾರತಮ್ಯದೊಂದಿಗೆ ಅವಿನಾಭಾವಸಂಬಂಧ ಹೊಂದಿದ್ದು ಶೋಷಣೆ ಜಾತಿಯೂ ಒಂದು ಅಸ್ತ್ರವಾಗಿದೆ. ಪುರುಷ ಪ್ರಾಧಾನ್ಯ ಹಾಗೂ ಜಾತಿ ಶೋಷಣೆಗೆ ಎಂಬ ಎರಡರ ನಡುವೆ ಮಹಿಳೆಯರು ದೌರ್ಜನ್ಯಕ್ಕೊಳಗಾಗಿದ್ದಾರೆ, ದೇವದಾಸಿ, ಬಸವಿ, ವೇಶ್ಯೆ, ಜೋಗತಿಯಂತಹವರು, ಧಾರ್ಮಿಕ ಸಾಮಾಜಿಕ ಕಾರಣಗಳಿಗಾಗಿ ದೌರ್ಜನ್ಯಕೊಳಗಾದರೂ ಅವರೆಲ್ಲ ದಲಿತ, ಹಿಂದುಳಿದ ಸಮುದಾಯದ ಹೆಣ್ಣುಮಕ್ಕಳೆನ್ನುವುದನ್ನು ಗಮನಿಸಬೇಕು. ದಲಿತ ಮಹಿಳೆ ಜಾತಿ, ಧರ್ಮ ದೇವರ ಹೆಸರಿನಲ್ಲಿ ಸಮಾಜದ ಹಾಗೂ ಕೌಟುಂಬಿಕ ದೌರ್ಜನ್ಯದ ಇಜ್ಜಾಯಿ ಖಡ್ಗಕ್ಕೆ ನಲುಗುವ ಬಲಿಪಶುವಾಗುತ್ತಾಳೆ.

ಈ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಹೇಗೆ ಬಲಿಯಾಗುತ್ತಾಳೆ ಎಂಬುದನ್ನು ಕಾಣಬಹುದು. ಪುರುಷನ ಅತಿ ಕಾಮುಕತೆಗೆ ಅವನ ಹೆಂಡತಿಯುನ್ನು ಬಲಿತೆಗೆದುಕೊಳ್ಳುತ್ತಾನೆ. ಈ ವಿವಾಹ ಸಂಸ್ಥೆ ಎನ್ನುವುದು ಲೈಂಗಿಕ ಇಚ್ಛೆಯನ್ನು ಈಡೇರಿಸಿಕೊಳ್ಳುವುದಾಗಿದೆ. ಮದುವೆಯ ಚೌಕಟ್ಟಿನೊಳಗೆ ಗಂಡನೊಬ್ಬ ಹೆಂಡತಿಯ ಮೇಲೆ ಅತ್ಯಾಚಾರ ಮಾಡಿ ಅವಳ ಸಾವಿಗೆ ಕಾರಣವಾಗುವ ಹೃದಯ ಹಿಂಡುವ ಘಟನೆಯೊಂದು ಹೀಗಿದೆ ಇದು ಕಾಮದ ಕ್ರೌರ್ಯದ ಅಟ್ಟಹಾಸ, ತುಂಬು ಬಸುರಿ ಕಲ್ಲವ್ವ ಆಗಲೇ ಆರು ಮಕ್ಕಳ ತಾಯಿ, ಅವಳ ಕುಡುಕ ಗಂಡ ಮೂಕ್ಯಾ, ದಿನವು ಕುಡಿದು ಬಂದು ಹೆಂಡತಿಯ ಮೇಲೆ ಎರಗುತ್ತಾನೆ. ವೈವಾಹಿಕ ಚೌಕಟ್ಟಿನೊಳಗೆಯೇ ಪ್ರತಿದಿನವೂ ಅವನು ಹೆಂಡತಿಯ ಮೇಲೆ ಅತ್ಯಾಚಾರವೆಸಗುತ್ತಿರುತ್ತಾನೆ. ಅದು ಕೊನೆಯ ದಿನ ಸಾವಿನ ಹಿಂದಿನ ದಿನವೂ ಅವಳ ಮೇಲೆ ಎರಗಿದಾಗ ಅವಳು ಅರ್ಥವಾಗಿ ಗಂಡನಿಗೆ "ಬ್ಯಾಡೋ ಇದೆಲ್ಲಾ ನನ್ ಕೈಲಿಂದ ತಾಳ್ಕೋಳ್ಳಕ್ಕಾಗಂಗಿಲ್ಲೇವೋ... ಎಂಟು ತಿಂಗಳು ತುಂಬ್ಯಾದ ನನಗ... ಇಂದಾ ನಾಳೀಗಿ ಬಾಣತನ ಆಗಾ ದಿನಗೋಳು ಅವಾ... ಕೂಸಿನ ನೆತ್ತಿ ಅಂಬಾದು ನನ್ನ ಕಿಪ್ಪಡ್ಯಾಗ ಬಂದು ಕಲ್ಲಕುಂತಂಗಾಗ್ಯದೋ... ನಾ ಸತ್ತೇ ಹೋಗ್ತೀನೀ... ನಿನ್ ಕಾಲಿಗಿ ಬಿದ್ದು ಕೈ ಮುಗಿತೀನೋ... ಯಾ ಜೋಗಣಿ ಹಾಸಗಿಗರೆ ಹೋಗೊ... ಮಾರಾಯಾ.. ನನ್‌ಕೈಲಿಂದಾಗಲ್ಲೋ..." (ಪು.೨೮೫) ಅಂತ ಗೋಗರೆಯ್ಯುತ್ತಾಳೆ. ತನ್ನ ಗಂಡನಿಂದ ಬಿಡಿಸಿಕೊಳ್ಳಲಿಕ್ಕಾಗಿ ಸಹಾಯಕ್ಕೆಂದು ಆಕೆ ಹೊರಗಿನವರನ್ನು ಕೂಗಿ ಕರೆಯುತ್ತಾಳೆ ನಡುರಾತ್ರಿಯಲ್ಲಿ ಯಾರ ಸಹಾಯವೂ ದೊರೆಯದೆಂದಾಗ ಗಂಡನ ಆಕ್ರಮಣದಿಂದ ಅವಳು ಸಾವನ್ನಪ್ಪುತ್ತಾಳೆ. ಗಂಡನ ಅರೆ

ಕಾಮುಕತೆಗೆ ಮುಗ್ದ ಹೆಂಗಸು ಬಲಿಯಾಗಿ ಅವಳ ಆರು ಮಕ್ಕಳನ್ನು ತಬ್ಬಲಿಯನ್ನಾಗಿ ಮಾಡಿಹೋಗುತ್ತಾಳೆ.

ತೀರಾ ಕೆಳಸ್ತರದ ಜನ ಸಮುದಾಯವಾದ ಹೊಲೆಯರು, ಮಾದಿಗರು, ಮತ್ತು ಬುಡಬುಡಕಿ ಇತ್ಯಾದಿ ಕೆಳವಗದ ಜನರು ಹಸಿವಿನ ತೃಷೆಯನ್ನು ನೀಗಿಸಿಕೊಳ್ಳಲು ತಮ್ಮ ಮೈಮಾರಿಯಾದರೂ ಬಡತನದ ಬೇಗೆಯನ್ನು ನಿವಾರಿಸಿಕೊಳ್ಳುವ ಚಿತ್ರಣ ಸಮಾಜದ ಅಸಮಾನತೆಯನ್ನು ಎತ್ತಿಹಿಡಿಯುತ್ತದೆ. ಇದರಿಂದ ತುತ್ತು ಅನ್ನಕ್ಕಾಗಿ ಕಳ್ಳತನ ಮಾಡುವ ಮೋಸ ಮಾಡುವ ದಿಸೆಯಲ್ಲಿ ಸಮಾಜ ಘಾತಕ ಘಟನೆಗಳಿಗೆ ಕಾರಣವಾಗುತ್ತಿದ್ದರು. ತುತ್ತು ಅನ್ನಕ್ಕಾಗಿ ಊರಿಂದ ಊರಿಗೆ ಅಲೆಯುವ ಈ ಮಂದಿ ಅಕ್ಷರ ವಿಧ್ಯಾಭ್ಯಾಸದಿಂದ ದೂರವೆ ಉಳಿಯುತ್ತಿದ್ದರು. ಬಡತನದ ಬವಣೆ ಇವರನ್ನು ಕಾಡುತ್ತಿತ್ತು ಅಜ್ಞಾನ ಇವರಲ್ಲಿ ಮನೆಮಾಡಿತ್ತು. ವಿದ್ಯಾಭ್ಯಾಸದ ಅರಿವಿರದ ಈ ಜನ ತಮ್ಮ ಮಕ್ಕಳನ್ನು ವಿದ್ಯೆಯಿಂದ ದೂರವೇ ಉಳಿಸುತ್ತಿದ್ದರು.

ಸರ್ಕಾರ ಇವರಿಗಾಗಿ ಅನೇಕ ಸವಲತ್ತುಗಳನ್ನು ನೀಡಿದರೂ ಅದನ್ನು ಉಪಯೋಗಿಸಿಕೊಳ್ಳದೆ ಅನಕ್ಷಸ್ಥರಾಗಿ ಇವರ ಮಕ್ಕಳು ಉಳಿಯುತ್ತಿರುವುದು ಕಂಡುಬರುತ್ತದೆ. ಸಮಾಜದ ಮುಖ್ಯವಾಹಿನಿಗೆ ಬರಲು ಪ್ರಯತ್ನಿಸಿದರೂ ಸಹ ಮೇಲ್ವರ್ಗದವರ ಸಂಚುತನ ಇವರನ್ನು ಬಡವರಾಗಿಯೇ ಉಳಿಯುವಂತೆ ಮಾಡುತ್ತಿತ್ತು. ಕೆಳವರ್ಗದ ಜನರು ಅಜ್ಞಾನ ತುಂಬಿದ ಅತಿಯಾದ ಲೈಂಗಿಕ ತೃಷೆ ಬಡತನದ ಬೇಗೆಗೆ ತೆರಳುತ್ತಿತ್ತು, ಇದರಿಂದ ಮನೆತುಂಬ ಮಕ್ಕಳು, ಹುಟ್ಟಿಗೆ ಕಾರಣವಾಗಿ ಎಷ್ಟೇ ದುಡಿದರೂ ಸಹ ಸಂಸಾರದ ನಿರ್ವಹಣೆಗೆ ಸಾಕಾಗದೆ ಬಡವರು ಬಡವರಾಗಿಯೇ ಇರುತ್ತಿದ್ದರು. ಇವರ ಇನ್ನೊಂದು ಅತಿಯಾದ ದುಶ್ಚಟವೆಂದರೆ ಸೇಂದಿ ಕುಡಿಯುವುದು ಈ ಜನರು ತಮ್ಮ ಹೆಂಡತಿಯನ್ನು ತಲೆಹಿಡಿದು ಸೇಂದಿ ಕುಡಿಯುವ ಹವ್ಯಾಸವನ್ನು ರೂಢಿಸಿಕೊಂಡಿರುವುದು. ಸಮಾಜದ ನೈತಿಕ ನೆಲೆಗಟ್ಟಿನಲ್ಲಿ ವೈರುಧ್ಯವೆನಿಸುತ್ತದೆ. ಧಾರ್ಮಿಕ ವಿಚಾರಗಳಲ್ಲಿ ಸಾಮರಸ್ಯ ಮತ್ತು ವೈರುಧ್ಯಗಳು ಸಮಾಜದಲ್ಲಿ ಜೊತೆ ಜೊತೆಯೇ ಸಾಗಿಬರುವ ಪ್ರಕ್ರಿಯೆ ಧಾರ್ಮಿಕತೆಯನ್ನು ದುರುಪಯೋಗಪಡಿಸಿಕೊಂಡು ಮೇಲ್ವರ್ಗದ ಜನರು ತಮ್ಮ ಸ್ವಾರ್ಥಕ್ಕಾಗಿ ಕೆಳವರ್ಗದ ಮಹಿಳೆಯರನ್ನು ಬಲಿಪಶುವಾಗಿಸಿಕೊಳ್ಳುವ ಪ್ರಕ್ರಿಯೆಯನ್ನು ಕಾಣಬಹುದು.

ಬದುಕು ಕಾದಂಬರಿಯಲ್ಲಿಯೂ ಸಹ ಮೂಢನಂಬಿಕೆ, ಕೆಟ್ಟ ಆಚರಣೆಗಳು ನೀತಿ ನಿಯಮಗಳು ಇದ್ದು ಆ ಮೌಢ್ಯತೆಗಳಿಗೆ ಹೆಚ್ಚಾಗಿ ಬಲಿಯಾಗುವುದು ಹೆಣ್ಣೇ ಎಂಬುದು ವಾಸ್ತವದ ಸಂಗತಿ. ಹೆಣ್ಣು ಬರೀ ಮೌಢ್ಯತೆ ಮೂಢನಂಬಿಕೆ ಮತ್ತು ಮೇಲ್ವರ್ಗದವರಿಂದ ಮಾತ್ರ ಶೋಷಣೆಗೊಳಗಾಗದೇ ಜನರನ್ನು ಕಾಪಾಡಬೇಕಾದ

ಕಾನೂನನ್ನು ರಕ್ಷಿಸಬೇಕಾದ ಮಹಿಳೆಯರನ್ನು ಕಾಪಾಡಬೇಕಾಗಿದ್ದ ಪೋಲೀಸರು ಒಂಟಿ ಮಹಿಳೆಯರ ಮೇಲೆ ಹಲ್ಲೇ ಮಾಡುತ್ತಾರೆ. ಅವರನ್ನು ಕಾಮುಕ ದೃಷ್ಟಿಯಿಂದ ಕಾಣುತ್ತಾರೆ. ಅದನ್ನು ಈ ರೀತಿಯಾಗಿ ನೋಡಬಹುದು.

ಉಪ್ಪು ತಿಂದವನು ನೀರು ಕುಡಿಯಲೇ ಬೇಕು ತಪ್ಪುಗಳನ್ನು ಮಾಡಿದರೆ ಶಿಕ್ಷೆ ಕಟ್ಟಿಟ್ಟದ್ದೆ ನಮ್ಮ ತಪ್ಪುಗಳೇ ಶಿಕ್ಷೆಯ ಎಚ್ಚರಿಕೆಯನ್ನು ನೀಡುತ್ತವೆ ಎಂದು ನಮ್ಮನ್ನು ನಾವು ಸಮಧಾನಿಸಿಕೊಂಡರೂ ಹೆಚ್ಚಾಗಿ ಶಿಕ್ಷೆಗೊಳಗಾಗುವುದು ಹೆಣ್ಣು ಮಾತ್ರವಾಗಿದೆ.

ತಾನು ಯಾವುದೇ ತಪ್ಪು ಮಾಡಿಲ್ಲದಿದ್ದರೂ ತಪ್ಪಿನಲ್ಲಿ ತನ್ನ ಪಾತ್ರವೇನು ಇಲ್ಲದಿದ್ದರೂ ಶಿಕ್ಷೆಯನ್ನು ಅನುಭವಿಸುವುದು, ಹೆಣ್ಣುಮಾತ್ರ ಯಾರೋ ಮಾಡಿದ ತಪ್ಪಿಗೆ ಇಲ್ಲಿ ಬಸ್ಯಮ್ಮ, ಸಕ್ಕೋಬಾಯಿ, ಗುಜ್ಜವ್ವರಂತಹ ಮುಗ್ಧ ಝೋಪಡಿಯ ಹೆಣ್ಣುಮಕ್ಕಳು ನೋವನ್ನು ಅನುಭವಿಸುತ್ತಾರೆ.

ಮಾರುತಿ ಝೋಪಡಿ ಪಟ್ಟಿಯಲ್ಲಿ ವಾಸವಿರುವ ನಾಗ್ಯ ಪ್ರತಿದಿನ ಸೂಪರ್ ಮಾರ್ಕೇಟ್ ಬಸ್ ನಿಲ್ದಾಣದಲ್ಲಿ ನಿಲ್ಲುವುದು ಬಸ್ಸುಬಂದು ನಿಲ್ಲುವಾಗ ಹೋಗುವಾಗಲೆಲ್ಲಾ ಆ ಜನರ ಗುಂಪಿನಲ್ಲಿ ಒಳಹೊಕ್ಕಿ ತಾನು ಬಸ್ಸಿನ ಪ್ರಯಾಣಿಕನಂತೆ ನಿಂತು ಗಂಡಸರ ಜೇಬಿಗೆ ರೇಜರ್ ಪತ್ತೆಹಾಕಿ ಕೊಯ್ದು ಅವರ ಬಳಿ ಇರುವ ಹಣ ಪಾಕೇಟು ಹಾರಿಸಿಕೊಂಡು ಕಳ್ಳತನ ಬರುವ ಕೆಲಸವನ್ನು ಮಾಡುತ್ತಾನೆ. ಇವನು ಮಾಡುವ ಇಂತಹ ದುಷ್ಕೃತ್ಯಕ್ಕೆ ಇವನಿಗೆ ಶಿಕ್ಷೆಯಾಗದೆ ಊರಿನ ಹೆಣ್ಣುಮಕ್ಕಳಿಗೆ ಹಾಗೂ ನಾಗ್ಯನ ಹೆಂಡತಿಗೆ ಪೋಲಿಸರು ಕಿರುಕುಳವನ್ನು ನೀಡುವುದನ್ನು ಕಾಣಬಹುದು. ಊರಿನೊಳಗೆ ಪೋಲೀಸರು ಬಂದಿದ್ದನ್ನು ನೋಡಿ ಜನರೆಲ್ಲಾ ಕಕ್ಕಾಬಿಕ್ಕಿಯಾಗುತ್ತಿರುವಾಗಲೇ ಇನ್ಸ್‌ಪೆಕ್ಟರ್ ಎಲ್ಲಾ ಗುಡಿಸಲುಗಳಿಗೆ ನುಗ್ಗಿ ಆ ಬೋಸಡಿ ಮಗ ನಾಗ್ಯ ಎಲ್ಲಿದ್ದಾನೋ ಒದ್ದು ಎಳೆದುಕೊಂಡು ಬನ್ನಿ ಎಂದು ತನ್ನ ಕಾನ್ಸ್‌ಟೇಬಲ್‌ಗಳಿಗೆ ಆಜ್ಞೆಯನ್ನು ಮಾಡಿದಾಗ ಪೋಲೀಸರು ಮಾನವೀಯತೆಯನ್ನು ಮರೆತು ಕ್ರೂರವಾಗಿ ವರ್ತಿಸುವುದನ್ನು ನೋಡಬಹುದು.

ಶಾಣಪ್ಪನ ಹೆಂಡತಿ ಬಸ್ಯಮ್ಮ ಆಗ ತಾನೇ ಕೂಲಿಕೆಲಸ ಮುಗಿಸಿ ಗುಡಿಸಲಿಗೆ ಬಂದು ಹಸಿದ ತನ್ನ ಮಗುವಿಗೆ ಹಾಲುಣಿಸುತ್ತಿರುತ್ತಾಳೆ ಧಡಕ್ಕನೆ ಪೋಲೀಸನೊಬ್ಬ ಬಂದಾಗ ಗಾಬರಿಯಿಂದ ತನ್ನ ಮಗುವನ್ನೆತ್ತಿ ಎದ್ದು ನಿಲ್ಲುತ್ತಾಳೆ.

"ಯಾಕ್ರೀ ಯಪ್ಪಾ... ಏನಾಯ್ತ್ರಿ? ಎಂದು ಧೈರ್ಯಗೆಡದೆ ಅವಳು ಕೇಳಿದಾಗ ಪೇದೆ ಅವಳ ದೇಹವನ್ನು ನೋಡಿ ಹುಚ್ಚುಚ್ಚಾಗಿ ನಗುತ್ತಾ ಎಲ್ಲಿ ಅಡಗ್ಯಾನ ಆ ನಾಗ್ಯ ಹೇಳಬೇ... ಇಲ್ಲಂದ್ರೆ ಹೊಡ್ದು ನಿನ್ ಟೊಂಕಾಮುರೀತಿನಿ ನೋಡು.... ಎಂದು ಅವಳ ಮೈ ಮೇಲೆ ಹಾಯುತ್ತಾನೆ.

ಮಾತನಾಡಲು ಹೋದ ಬಸ್ಯಮ್ಮನಿಗೆ ಯೆಲ್ಲಾ... ಝೋಪಡಿಪಟ್ಯಾಗ ಹುಡಕ್ಬೇಕಂದಾರ ನಮ್ಮ ಸಾಬ್ರು... ಅವನ ಹುಕುಮಾಗ್ಯಾದೇ ನಿನ್ನವ್ವನಾ... ನಿಮ್ಮಂದೀ ಗುಣಾ ನಮಗೊತ್ತಿಲೇನು? ಒಬ್ಬಾವ ಯಾಂವರೆ ಕಳ್ಳತನ ಮಾಡಿ ಓಡಿ ಬಂದ್ರ ಪೂರಾ ಬಸ್ತ್ಯಾಗೇ ಯಾರ ಗುಡಸ್ಯಾಗರೇ ಮುಚ್ಚಿಡ್ತೀರಿ ಆ ಕಳ್ಳಗ ಎಲ್ಲೋರದೂ ಝೋಪಡಿ ತಲಾಶ್ ಮಾಡ್ತೀವೀ... ಹುಂ... ಸರಿ ಅಕಾಡೀ ಅನ್ನುತ್ತ ಜಬರದಸ್ತಿಯಿಂದ ಅವಳ ರಟ್ಟೆಗೆ ಕೈ ಹಾಕಿ ಅವಳ ಎದೆಯನ್ನು ಹಿಸುಕಿ ಝೂಡಿಸಿ ಎಳೆದ ರಭಸಕ್ಕೆ ಅವಳು ಅವನೆದೆಗೆ ಬಡಿದು ನಿಂತಳು ಆ ರಭಸಕ್ಕೆ ಕೂಸಿನ ನೆತ್ತಿಗೆ ಗೋಡೆ ಬಡಿದು ಅದು ಜೀವ ಹೋದಂತೆ ಅಳತೊಡಗಿತು."(ಪು.೨೩೯) ಕಾಣುತ್ತೇವೆ. ಇದು ಇಷ್ಟಕ್ಕೆ ನಿಲ್ಲದೆ ಪಕ್ಕದ ಗುಡಿಸಲಿನಲ್ಲಿ ಅಡುಗೆಮಾಡಲು ಒಲೆಯನ್ನು ಊದುತ್ತಾ ಕುಳಿತಿದ್ದಂತಹ ಸಕ್ಕೋಬಾಯಿಯ ರಟ್ಟೆಯನ್ನು ಹಿಡಿದು ಹೊರಗೆ ಎಳೆದು ಜಗ್ಗುವುದನ್ನು ಕಾಣುತ್ತೇವೆ ಸಕ್ಕೋಬಾಯಿ ಅವನಿಂದ ತಪ್ಪಿಸಿಕೊಳ್ಳಲು ಕೊಸರಾಡಿದರೂ ಬಿಡದ ಪರಿಣಾಮದಲ್ಲಿ ಆತನನ್ನು ಬೈಯುತ್ತಾ ಲಟ್ಟಿಗೆಯನ್ನು ಮುರಿಯುವುದನ್ನು ಕಾಣುತ್ತೇವೆ ನಂತರ ಪೋಲೀಸರು ನಾಗ್ಯಾನ ಗುಡಿಸಲನ್ನು ನುಗ್ಗುತ್ತಾರೆ. ಕೌದಿ ರಗಟೆಯ ಮೇಲೆ ನರಳುತ್ತಿದ್ದ ಅವನ ಹೆಂಡತಿ ಹೊಟ್ಟೆ ಇಡಿದುಕೊಂಡು ಮೆಲ್ಲಗೆ ಎದ್ದು ಕುಳಿತಾಗ "ಏ ನಾಗ್ಯಯೆಲ್ಲಿ? ಅಂತ ಬೆದರಿಸುತ್ತಲೇ ನುಗ್ಗಿದ ಪೋಲಿಸರ ಲಾಠಿ ಏಟಿಗೆ ಅಡಿಕಿಲೇರಿಸಿದ್ದ ಗಡಿಗೆ ಮಡಿಕೆಗಳೆಲ್ಲ ಹೊಡೆದು ಚೂರಾಗುತ್ತವೆ. ಗಡಿಗೆಯಲ್ಲಿ ಇದ್ದಂತಹ ಅನಾಜು, ಹಿಟ್ಟು ಕಾರ, ಉಪ್ಪು ಮೊದಲಾದ ಎಲ್ಲಾ ವಸ್ತುಗಳು ನೆಲದ ಮೇಲೆ ಹರಿದಾಡಿದ್ದನ್ನು ಕಾಣಬಹುದು.

ಗಂಡ ಎಲ್ಲಿಗೆ ಹೋದನೆಂದು ಗೊತ್ತಿಲ್ಲವೆಂದು ಹೇಳಿ ಅಳುತ್ತಾ ಕುಳಿತ ಗುಜ್ಜವ್ವನ ಬೆನ್ನಿನ ಮೇಲೆ ಪೋಲಿಸಪ್ಪನು ಬೂಟುಗಾಲಿನಿಂದ ಒದೆಯುತ್ತಾನೆ. "ಖರೇ ಹೇಳು ಎಲ್ಲಿ ಅಡಕ್ಕೊಂಡಾನ ನಿನ್ ಗಂಡಾ? ಇಲ್ಲಂದ್ರ ಥಿನಾಲೀ ನಿನಗೆಳ್ಕೊಂಡು ಒಯ್ತೀವಿ ಠೇಸನ್ನಿಗಿ... ಅಲ್ಲೊಯ್ದು ನಿನಗ ಒದೀಲಕತ್ತರ ನಿನ್ ಗಂಡ ನಾಗ್ಯಾ ಎಲ್ಲಿದ್ದರನೂ ತಾನೇ ಓಡಿ ಬರ್ತಾನ" ನಂಬಲ್ಲಿ ಹಿಡ್ಕೊಂಡು ಬಂದು ಅವಳ ರಟ್ಟೆ ಹಿಡಿದು ಎಳೆಯುತ್ತಾನೆ. ಮೊದಲೇ ಹೊಟ್ಟೆ ನೋವಿನಿಂದ ಬಳಲಿ ಮಲಗಿದ್ದ ಇವಳಿಗೆ ಮತ್ತಷ್ಟು ಮಾನಸಿಕವಾಗಿ ಕುಬ್ಜಳಾಗುವಂತೆ ಮಾಡುತ್ತದೆ.

"ನನಗೀ ಪೋಲಿಸ್ರು ಕೊಲ್ಲಿ ಬಿಡ್ತಾರ ಬರ್‍ರವೋ ನಾ ಸಾಯ್ತೀನೋ ಯಪ್ಪಾ... ಯಣ್ಣಾ... ಯಾರರೆ ಬಂದು ನನಗ ಬಿಡಸ್ಗೋರ್‍ರೋ... ಅನ್ನುತ್ತ ಅವಳು ಲಬ ಲಬನೆ ಹೊಯ್ಕೆಂಳ್ತಾಳ" (ಪು.೨೪೧) ನರಳುತ್ತಾಳೆ ಸಂಕಟಪಡುತ್ತಾಳೆ. ಹೆಣ್ಣುಮಗಳು ಎಂದು ಕರುಣನೆ ತೋರಿಸದೆ ಅವಳಲ್ಲಿ ರಾಕ್ಷಸರ ಹಾಗೆ ನಡೆದುಕೊಳ್ಳುತ್ತಾರೆ.

"ಬಟ್ಟೆಯ ಮೇಲೆ ಮುಳ್ಳುಬಿದ್ದರೂ ಮುಳ್ಳಿನ ಮೇಲೆ ಬಟ್ಟೆಬಿದ್ದರೂ ಹರಿಯುವುದು ಮಾತ್ರ ಬಟ್ಟೆಯೇ ಎಂಬ ಜನಪದ ಗಾದೆಯಂತೆ ಗಂಡ ನಾಗ್ಯಾನ ಕಳ್ಳತನದಿಂದ ಈ ಕಳ್ಳತನದ ದಂಗೆಯಿಂದಾಗಿ ಅದರ ಪರಿಣಾಮವನ್ನು ಗುಜ್ಜವ್ವನು ಎದುರಿಸುತ್ತಾಳೆ. ಸಮಾಜದಲ್ಲಿ ಇದು ವ್ಯಾಪಕವಾಗಿ ಪಸರಿಸಿದ್ದು ಹೆಣ್ಣು ಬವಣೆಗಳಲ್ಲೇ ಬದುಕನ್ನು ಸವೆಸುತ್ತಿದ್ದಾಳೆ.

ಹೆಣ್ಣು ಅಂದರೇನು ಹಾಗೆ ಅವಳು ಗಂಡಸರು ಮಾಡುವ ಯಾವುದೇ ತಪ್ಪುಗಳಿಗೆ ಇವಳೇ ಹೊಣೆಯಾಗಿರುವಂತೆ ಸಮಾಜ ನೋಡುತ್ತದೆ. ಕೆಲವೊಂದು ಸಲ ಈ ಗಂಡಸು ಮಾಡುವ ತಪ್ಪುಗಳಿಗೆ ಅಥವಾ ಅವರಿಂದ ತಿಳಿದು ತಿಳಿಯದೆಲ್ಲ ಮಾಡಿರೂ ತಪ್ಪುಗಳಿಗಾಗಿ ಹೆಣ್ಣುಮಕ್ಕಳು ಶಿಕ್ಷೆಯನ್ನು ಅನುಭವಿಸುತ್ತಾರೆ.

ಜವಾದಾರ ಮಲ್ಲಪ್ಪ ತನ್ನ ಮಗಳು ಕಾಶವ್ಮ ಗಂಡನನ್ನು ಬಿಟ್ಟು ಲಿಂಗರಾಜನೊಂದಿಗೆ ಬಂದು ತೋಟದ ಮನೆಯಲ್ಲಿ ಇರುವುದನ್ನು ತಿಳಿದು ಮಲ್ಲಪ್ಪ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಇದನ್ನು ತಿಳಿದ ಅವನ ಹೆಂಡತಿ ಮಲ್ಲವ್ವ ಮಾನಸಿಕ ಅಸ್ವಸ್ಥಳಾಗಿ ಸಾಯುತ್ತಾಳೆ.

ಮಲ್ಲಪ್ಪ ಮಗಳಾದ ಕಾಶಿ ಲಿಂಗರಾಜನೊಂದಿಗಿರುವುದಕ್ಕೆ ಸಾಯುತ್ತನಾದರೂ ತಾನು ಮೊದಲು ಜೋಗಣಿಯರ ಹತ್ತಿರ ಇದ್ದದ್ದು ಮತ್ತು ಈರವ್ವನೊಂದಿಗೆ ಸಂಬಂಧಗಳನ್ನು ಯಾವುದನ್ನೂ... ನೆನಪಿಸಿಕೊಳ್ಳುವುದಿಲ್ಲ...

ಹೆಣ್ಣು ವ್ಯವಸ್ಥೆಯನ್ನು ಮೀರುವಾಗ ಅದನ್ನು ವಿರೋಧಿಸುವ ಮಲ್ಲಪ್ಪ ತಾನು ಮಾಡುವುದಾದರೂ ಸರಿಯೆಂದು ಆತ್ಮವಿಮರ್ಶೆ ಮಾಡಿಕೊಳ್ಳುವುದಿಲ್ಲ ಇಂತಹ ಪುರುಷ ಪ್ರದಾನ ಸಮಾಜ ವ್ಯವಸ್ಥೆಯಲ್ಲಿ ಪುರುಷರು ತಮ್ಮ ಹಿತವನ್ನು ಮಾತ್ರ ಕಾಪಾಡಿಕೊಳ್ಳುತ್ತಾರೆ. ಅವರಿಗೆ ಸ್ತ್ರೀಯರ ಹಿತಬಗ್ಗೆಯಾಗಲಿ ಅವರ ಪ್ರೀತಿ, ಆಸೆ, ಆಕಾಂಕ್ಷೆಗಳ ಬಗ್ಗೆಯಾಗಲಿ ಯಾವುದೇ ರೀತಿಯ ಗೌರವವಿರುವುದಿಲ್ಲ. ಮಹಿಳೆ ಪುರುಷರ ವಿರುದ್ಧದಿಂದ ಯಾವುದೇ ಕೆಲಸವನ್ನು ಮಾಡಿದರೂ ಸಹ ಪುರುಷ ವಿರುದ್ಧ ಕೆಲಸವಾಗಿ ನೋಡುತ್ತಾರೆ ವಿನಃ ಅದರ ಒಳಗಿರುವ ಒಳ್ಳೆಯ ಅಂಶಗಳನ್ನು ಗಮನಿಸುವುದನ್ನು ಕಾಣಬಹುದು.

ಕಲ್ಯಾಣಿಯು ಜೈಲಿಗೆ ಸೇರಿದಾಗ ಅವನ ಹೆಂಡತಿ ಬೆಳ್ಳಿ ನಾನಾ ರೀತಿಯ ಕಷ್ಟಕ್ಕೆ ಗುರಿಯಾಗುತ್ತಾಳೆ ಹೊಲ ತೋಟಕ್ಕೆ ಎತ್ತಿನಂತೆ ದುಡಿಯುತ್ತಾಳೆ ಮೇಲ್ವರ್ಗದವರ ದೌರ್ಜನ್ಯಕ್ಕೆ ನಲುಗುತ್ತಾಳೆ ಇಷ್ಟೆಲ್ಲಾ ಸಂಕಟಗಳೊಂದಿಗೆ ನಲುಗುತ್ತಾಳೆ ಜೊತೆಗೆ ತನ್ನ ಬದುಕನ್ನು ನಡೆಸುತ್ತಾ ಬಂದರೂ ಸಹ ತನ್ನ ಮಗ ಸಣ್ಣಮಲ್ಲ ತಂದೆಯನ್ನು ಸೇರದೇ ಮರಾಠಿ ಹುಡಿಗಿಯನ್ನು ಮದುವೆಯಾಗುವುದು. ಶಿವು ಸನ್ಯಾಸಿಯಾಗುವುದರ ಮೂಲಕ

ವ್ಯವಸ್ಥೆಯನ್ನು ವಿರೋಧಿಸುತ್ತಾನೆ. ಬೆಳ್ಳಿಯ ಗಂಡ ಬಿಡುಗಡೆಯಾಗಿ ಬಂದರೂ ಅವನಲ್ಲಿ ಮೊದಲಿನಂತೆ ಜೀವನದಲ್ಲಿ ಉತ್ಸಾಹವಿರುವುದಿಲ್ಲ ಅವನಿಗೆ ಎಲ್ಲರೂ ಕೊಲೆ ಮಾಡಿ ಜೈಲಿಗೆ ಹೋಗಿ ಬಂದವನು ಎಂದು ಅವಮಾನ ಮಾಡುತ್ತಿರುತ್ತಾರೆ. ಇದರಿಂದ ಅವನು ಬೇಸತ್ತಿರುತ್ತಾನೆ. ಇದನ್ನು ಕಂಡ ಬೆಳ್ಳಿ ತನ್ನ ಗಂಡ ಮೊದಲಿನಂತೆ ಲವಲವಿಕೆಯಿದ ಇಲ್ಲ ಎಂದು ಮನದಲ್ಲಿಯೇ ಕೊರಗುವುದನ್ನು ಕಾಣಬಹುದು, ಈ ರೀತಿಯಲ್ಲಿ ಬದುಕು ಕಾದಂಬರಿಯು ಮಹಿಳೆಯರ ನೋವು ನಲಿವು, ದುಃಖ ದುಮ್ಮಾನ ಹೀಗೆ ಇನ್ನೂ ಅನೇಕ ಆಯಾಮಗಳನ್ನು ಪ್ರತಿಯೊಂದು ಹಂತದಲ್ಲೂ ಮಹಿಳೆಯರು ಅನಭವಿಸುವ ನೋವುಗಳನ್ನು ಪ್ರತಿಬಿಂಬಿಸುತ್ತಾ ಹೋಗುವುದರ ಮೂಲಕ ಮಹಿಳಾ ಸಂವೇದನೆಯ ಅಂಶಗಳನ್ನು ಬದುಕು ಕಾದಂಬರಿಯು ತಿಳಿಸಿಕೊಡುತ್ತದೆ.

# ಅಧ್ಯಾಯ ಮೂರು

## ಬಾಕಿ ಕಾದಂಬರಿಯಲ್ಲಿ ಮಹಿಳಾ ಹರವುಗಳು

# ಅಧ್ಯಾಯ ಮೂರು

## ಬಾಕಿ ಕಾದಂಬರಿಯಲ್ಲಿ ಮಹಿಳಾ ಹರವುಗಳು

'ಹಳ್ಳಿಯ ಮುಗ್ಧ ಹೆಣ್ಣುಮಕ್ಕಳ ಸೂಕ್ಷ್ಮ ಸಂವೇದನೆಗಳನ್ನು ಬಹಿರಂಗಪಡಿಸುವ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣು ಜೀವನವನ್ನು ತುಚ್ಛವಾಗಿ ಕಾಣುವುದನ್ನು ಅನೇಕ ಕಾದಂಬರಿಗಳಲ್ಲಿ ಕಾಣುತ್ತೇವೆ. ಮಹಿಳೆ ಅಬಲೆಯೆಂದು ಶೋಷಣೆ ಮಾಡುವ ಈ ಸಮಾಜದಲ್ಲಿ ಮಹಿಳೆ ಸಬಲಳಾಗಿ ಬದುಕು ನಡೆಸಬಲ್ಲಳು ಮತ್ತು ಸಂದರ್ಭ ಬಂದರೆ ಆ ಸಮಾಜವನ್ನೇ ಎದುರಿಸಿ ನಿಲ್ಲಬಲ್ಲಳು. ಈ ಸಾಮಾಜಿಕ ವ್ಯವಸ್ಥೆಯಲ್ಲಿ ಶಿಕ್ಷಣ ಪಡೆಯುವುದೇ ಮರಿಚೀಕೆಯಾದ ಕಾಲಮಾನದಲ್ಲಿ ಜನಿಸಿದ ತೀರ ಕೆಳವರ್ಗದ ಅನಕ್ಷರಸ್ಥ ಕುಟುಂಬದಿಂದ ಬಂದ ಮಹಿಳೆ ಶಿಕ್ಷಣ ಪಡೆದು ಒಬ್ಬ ಸಮಾಜಮುಖಿ ಲೇಖಕಿಯಾಗಿ ಅನೇಕ ವಸ್ತು ವಿಷಯವನ್ನಿಟ್ಟುಕೊಂಡು 'ಬಾಕಿ' ಕಾದಂಬರಿಯನ್ನು ರಚಿಸಿದ್ದಾರೆ.

ಜಾತಿ ವ್ಯವಸ್ಥೆಯನ್ನು ಪೋಷಿಸಿಕೊಂಡು ಬರುತ್ತಿರುವ ಭಾರತೀಯ ವೈಧಿಕಶಾಹಿ ಸಮಾಜ ವ್ಯವಸ್ಥೆಯಲ್ಲಿ ಸನಾತನ ಸಂಪ್ರದಾಯ ಬದ್ಧ ನಿರ್ದೇಶನದಲ್ಲಿಯೇ ಬದುಕು ಇರಬೇಕು, ಸಂಪ್ರದಾಯವನ್ನು ಧಿಕ್ಕರಿಸಿ ಬದಲಾವಣೆಗೆ ಹಂಬಲಿಸುವ ವ್ಯಕ್ತಿಗಳು ಧರ್ಮದ್ರೋಹಿ ಎನಿಸಿಕೊಳ್ಳುತ್ತಾರೆ. ಆತ ಸ್ವಜಾತಿಯವನಾಗಿದ್ದರೂ ಆತನನ್ನು ಹಿಂಸಿಸುವ ಮನಸ್ಸುಗಳು ಅಲ್ಲಿರುತ್ತವೆ. ಸ್ತ್ರೀ ಕುಲ ಮತ್ತು ಅಸ್ಪೃಶ್ಯರು ಸಾಮಾಜಿಕವಾಗಿ ಆರ್ಥಿಕವಾಗಿ ತುಳಿಯಲ್ಪಟ್ಟ ದಲಿತರು ಎಂಬ ಒಂದೆ ಲೇಬಲ್ಲಿನ ಅಡಿಯಲ್ಲಿ ಬಂದರೂ ಸ್ವತಂತ್ರವಾಗಿ ಅನಿಸಿದ್ದನ್ನು ನುಡಿಯುವ ತಮ್ಮ ರೊಚ್ಚನ್ನು ಸಹಜವಾಗಿಯೇ ಹೊರಹಾಕುವ ಅವಕಾಶಗಳು ಇಪ್ಪತ್ತನೇ ಶತಮಾನದಲ್ಲಿ ದೊರೆಯಿತು. ಆ ಸಂದರ್ಭದಲ್ಲಿ 'ಶಾಂತಿ' ತನ್ನ ಕತೆ ಕಾದಂಬರಿಗಳಲ್ಲಿ ತನ್ನ ಮನೆಯ ಸುತ್ತಮುತ್ತಲಿರುವ ಮತ್ತು ತಾನು ಸ್ವತಃ ಅನುಭವಿಸಿರುವ ನೋವುಗಳನ್ನು ಸಂಕಟಗಳನ್ನು ವಸ್ತುಗಳನ್ನಾಗಿಸಿ ಕಾದಂಬರಿಗಳನ್ನು ಬರೆದಿದ್ದಾರೆ.

ಬಹುಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಶಾಂತಿ ಬಡವರು. ನಿರ್ಗತಿಕರು ಕೂಲಿ ಕಾರ್ಮಿಕರು ಮೊದಲಾದವರ ಬದುಕನ್ನು ಅನಾವರಣಗೊಳಿಸಿದಳು. ಹಳ್ಳಿಯ ಗುಡಿಸಲು ಮನೆಯ ಮುಗ್ಧ ಹೆಣ್ಣುಮಕ್ಕಳು ಮೇಲ್ವರ್ಗದವರ ಕುತಂತ್ರಕ್ಕೆ ಹೇಗೆ ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ ಎನ್ನುವುದನ್ನು ತಮ್ಮ ಕಾದಂಬರಿಗಳಲ್ಲಿ ವಿವರಿಸಿದ್ದಾರೆ.

''ಬಾಕಿ ಕಾದಂಬರಿಯು ಗೀತಾನಾಗಭೂಷಣರವರ ಪ್ರಮುಖ ಕಾದಂಬರಿಗಳಲ್ಲೊಂದಾಗಿದೆ. ಈ ಕಾದಂಬರಿಯು ತೀರಾ ಕೆಳಸ್ಥರ ಜಾತಿಗಳಲ್ಲಿ ಜನಿಸಿದ ಮುಗ್ದ ಹೆಣ್ಣುಮಗಳು ತನ್ನ ತಂದೆ ತಾಯಿಯ ಬಡತನದಿಂದ ಮತ್ತು ಸಮಾಜದ ಜಾತಿ ವ್ಯವಸ್ಥೆಯಿಂದ ಪುರುಷ ಪ್ರಧಾನ ವ್ಯವಸ್ಥೆಯಿಂದಾಗಿ ಅನುಭವಿಸಿದ ಅಪಮಾನಗಳ ಶೋಷಣೆಗಳ ನೋವುಗಳ ಸಂವೇದನೆಗಳ ಕತೆಯಾಗಿದೆ.

ಕಾದಂಬರಿಯ ನಾಯಕಿಯಾದ ಶಾಂತಿ ತನಗೆ ಎದುರಾದ ಸವಾಲುಗಳನ್ನು ನೋವುಗಳನ್ನು ಸ್ವೀಕರಿಸುತ್ತಾ ಪ್ರವಾಹಕ್ಕೆ ಎದುರಾಗಿ ಈಜುತ್ತಲೇ ಬಂದಿರುವುದನ್ನು ಕಾಣಬಹುದು.

'ಶಾಂತಿಯು' ತನ್ನ ಜೀವನದುದ್ದಕ್ಕೂ ಬಾಲ್ಯ, ಹರೆಯ, ಮುಪ್ಪು, ಈ ಮುಖ್ಯ ಹಂತಗಳಲ್ಲಿ ಅವಳಿಗೆ ದೊರೆತದ್ದು ಮಾತ್ರ ಬರೀನೋವೆ. ಶಾಂತಿಗೆ ತನ್ನ ಜೀವನ ಎನ್ನುವುದು ಬೇವಿನಕಾಯಿಗಳ ಸರಮಾಲೆಯಾಗಿತ್ತು. ನಿಜ ಆದರೆ ಅವಳೊಳಗಿನ ಕಾದಂಬರಿಕಾರ್ತಿಯನ್ನು ಅದುವಿಡುವ ಧೈರ್ಯ ಮಾತ್ರ ಯಾರಿಂದಲೂ ಯಾವುದರಿಂದಲೂ ಸಾಧ್ಯವಾಗುವುದಿಲ್ಲ. ಕನ್ನಡ ಸಾಹಿತ್ಯದಲ್ಲಿ ತನ್ನ ಗುಡಿಸಲು ಜನರ ಬದುಕು-ಬವಣೆ ಅವರ ಶೋಷಣೆಗಳ ವಿರುದ್ಧ ಪ್ರತಿಭಟಿಸುತ್ತಾ ಅವುಗಳನ್ನು ದಾಖಲಿಸಬೇಕು ಅನ್ನುವ ಛಲದಿಂದ ಬರೆದಳು ಮತ್ತು ಗುಡಿಸಲು ಮುಗ್ಧ ಹೆಂಗಸರಿಗಾಗಿಯೇ ತನ್ನ ಬರಹವನ್ನು ಮೀಸಲಾಗಿಟ್ಟಿದ್ದನ್ನು ನೋಡಬಹುದು.

ಒಬ್ಬ ಸಾಮಾನ್ಯ ದಲಿತ ಕುಟುಂಬದ ಹೆಣ್ಣುಮಗಳು ಸಮರ್ಥ ಲೇಖಕಿಯಾಗಿ ಹೊರಹೊಮ್ಮಲು ತನ್ನ ಜೀವನದಲ್ಲಿ ಅನುಭವಿಸಿದ ಏಳು ಬೀಳುಗಳನ್ನು ಕೆಳಗಿನ ನೆಲೆಗಳಲ್ಲಿ ಕಾಣಬಹುದು.

೧. ಮಹಿಳಾ ಆತ್ಮಾವಲೋಕನ

೨. ಪುರುಷ ವಿರೋಧಿ ನೆಲೆಗಳು

೩. ಸ್ತ್ರೀ ಮತ್ತು ಆರ್ಥಿಕ ವ್ಯವಸ್ಥೆ

೪. ಧಾರ್ಮಿಕ ಆಚರಣೆಗಳಲ್ಲಿ ಮಹಿಳೆ

## ೧. ಮಹಿಳಾ ಆತ್ಮಾವಲೋಕನ

ಶಾಂತಿ ಸಾವಳಗಿಯವರ ವೈಯಕ್ತಿಕ ಹಾಗೂ ಅವರ ಸಾಹಿತ್ಯಿಕ ಸಾಧನೆಯ ಅಧ್ಯಯನ ಕೈಗೊಳ್ಳುವಾಗ, ಅವರು ನಡೆದು ಬಂದ ದಾರಿಯನ್ನು ನಂಬಿದ ಜೀವನ ಸಿದ್ಧಾಂತಗಳನ್ನು ಪಡೆದ ಅನುಭವಗಳನ್ನು ಪರಿಗಣಿಸುವುದು ಅವಶ್ಯವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಶಾಂತಿ ಸಾವಳಿಗಿಯವರ ಜೀವನದ ವೈಚಾರಿಕತೆಯ ತಿರುವುಗಳನ್ನು ಹಾಗೂ ಅವರ ಬರವಣಿಗೆಗೆ ಪ್ರೇರಣೆ ನೀಡಿದ ಹಿನ್ನೆಲೆ ಸಾಮಾಜಿಕ, ಸಾಂಸ್ಕೃತಿಕ ಪರಿಸರವನ್ನು ಸೂಕ್ಷ್ಮವಾಗಿ ಇಲ್ಲವೇ ಆಳವಾಗಿ ಗಮನಿಸಬಹುದು. ಯಾಕೆಂದರೆ ಯಾವುದೇ ವ್ಯಕ್ತಿಯ ಬದುಕಿನ ಸೋಲು ಗೆಲವುಗಳಿಗೆ ಅವರ ಜೀವನದಲ್ಲಿ ಒದಗಿದ ಘಟನೆಗಳು ಕಾರಣವಾಗುತ್ತವೆ. ಪರಿಸರದ ಕೂಸಾದ ವ್ಯಕ್ತಿ ಸಾಮಾಜಿಕ ಪ್ರೇರಣೆ, ಪ್ರೋತ್ಸಾಹಗಳಿಂದ ಬೆಳೆಯುವ ಹಾಗೂ ಸಾಧಿಸುವ ಸಂದರ್ಭಗಳು ಕೆಲವಾದರೆ, ಇಂತಹ ಅವಕಾಶಗಳಿಂದ ವಂಚಿತರಾಗುವ ಸಂದರ್ಭದಲ್ಲಿಯೂ ಎಲ್ಲವನ್ನು ಮೆಟ್ಟಿನಿಂತು ಮುನ್ನಡೆಯುವ ವ್ಯಕ್ತಿಗತ ಸಾಧನೆ ಅಪೂರ್ವವೆನ್ನಿಸುತ್ತದೆ ಇಂಥ ಅಪರೂಪದ ಸಾಧನೆಗೆ ಉತ್ತಮ ಉದಾಹರಣೆಯಾಗಿ “ಶಾಂತಿ ಸಾವಳಗಿಯುವರನ್ನು ನಿಲ್ಲಿಸುತ್ತಾರೆ ಕಾದಂಬರಿಕಾರರು.

ಶಾಂತಿ ಸಾವಳಿಗಿಯವರು ತಂದೆ ಶಾಂತಪ್ಪ ತಾಯಿ ಶರಣಮ್ಮ ಶಾಂತಪ್ಪ ಕಲಬುರ್ಗಿಯ ಬಟ್ಟೆ ಗಿರಣಿಯಲ್ಲಿ ಕೂಲಿ ಕೆಲಸ ಮಾಡುತ್ತಿದ್ದ ಶರಣಮ್ಮ ಮನೆಯಲ್ಲಿ ಇದ್ದು ಮಕ್ಕಳನ್ನು ನೋಡಿಕೊಳ್ಳುತ್ತಿದ್ದಳು. ಜೊತೆಗೆ ಯಾರಾದರೂ ಮನೆಯಲ್ಲಿ ಕೆಲಸಕ್ಕೆ ಕರೆದರೆ ಹೋಗುತ್ತಿದ್ದಳು ದವಸ ಧಾನ್ಯಗಳನ್ನು ಸ್ವಚ್ಛ ಮಾಡಲು ಕರೆದರೆ ಹೋಗುತ್ತಿದ್ದಳು. ಅವರು ಇವಳಿಗೆ ತಿನ್ನಲು ಮನೆಯಲ್ಲಿ ಮಿಕ್ಕ ಆಹಾರವನ್ನು ಕೊಡುತ್ತಿದ್ದರು. ಭಾರತಕ್ಕೆ ಸ್ವಾತಂತ್ರ್ಯ ಬಂದನಂತರ ಮಕ್ಕಳಿಗಾಗಿ ಶಾಲೆಗಳು ಶುರುವಾದವು, ಶಾಂತಿಯವರು ಕಲ್ಬುರ್ಗಿಯ ಮಾನಸ ಬದರಾವಾಡೆಯಲ್ಲಿದ್ದರು. ಅಲ್ಲಿ ಹಾರುವರ (ಬ್ರಾಹ್ಮಣರ) ಮನೆಗಳೇ ಬಹಳ ಇದ್ದವು ಎಲ್ಲರ ಮನೆಯ ಮಕ್ಕಳು ಪಾಟಿಚೀಲವನ್ನು ತೆಗೆದುಕೊಂಡು ಶಾಲೆಗೆ ಹೋಗುತ್ತಾರೆ. ಇದನ್ನುಕಂಡ ಶಾಂತಿಗೆ ತಾನೂ ಶಾಲೆಗೆ ಹೋಗಿ ವಿದ್ಯಾವಂತೆಯಾಗಬೇಕು ಎನ್ನುವ ಆಸೆ ಚಿಗುರಿತು. ಇದನ್ನು ತಂದೆಗೆ ಹೇಳುತ್ತಾಳೆ. ಶಾಂತಪ್ಪ ತುಂಬಾ ಖುಷಿಯಿಂದ ಶಾಲೆಗೆ ಕಳುಹಿಸಲು ಒಪ್ಪುತ್ತಾನೆ. ಏಕೆಂದರೆ ಶಾಂತಪ್ಪ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿರುತ್ತಾನೆ. ಇದರಿಂದ ಜೈಲಿಗೆ ಹೋಗಿರುತ್ತಾನೆ. ಅಲ್ಲಿ ವಿದ್ಯಾವಂತರ ಸಂಪರ್ಕ ಸ್ನೇಹ ಉಂಟಾಗಿತ್ತು. ಇದರಿಂದ ವಿದ್ಯೆಯ ಮಹತ್ವ ಶಾಂತಪ್ಪನಿಗೆ ತಿಳಿದಿರುತ್ತದೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಮಹಿಳೆಯರಾದ ವಿಜಯಲಕ್ಷ್ಮಿ ಪಂಡಿತ್ ಲಕ್ಷ್ಮೀ ಸೈಗಲ್, ಮೊದಲಾದ ವಿದ್ಯಾವಂತ ಮಹಿಳೆಯರು ಭಾಗವಹಿಸಿದ್ದನ್ನು

ಕಂಡ ಶಾಂತಪ್ಪನಿಗೆ ಹೆಣ್ಣುಮಕ್ಕಳಿಗೆ ವಿದ್ಯೆ ಕಲಿಸಬೇಕು ಇದರಿಂದ ಅವರ ಬದುಕು ಉಜ್ವಲವಾಗುತ್ತದೆ ಅನ್ನುವ ನಬಿಕೆಯನ್ನು ಹೊಂದಿದ್ದ ಆದರೆ ಶರಣಮ್ಮ ಶಾಂತಿಯನ್ನು ಶಾಲೆಗೆ ಕಳುಹಿಸಲು ಮನಸ್ಸು ಇರುವುದಿಲ್ಲ.

"ಹೂ... ಅಕಿ ಹೇಳ್ತಾಳಂತ ಅಕಿನ ತಾಳಕ್ಕ ನೀ ಕುಣೀಬ್ಯಾಡ ನಮ್ಮಂದ್ಯಾಗ ಗಂಡು ಮಕ್ಕಳೇ ಸಾಲಿ ಕಲೆಂಗಿಲ್ಲ. ಹಿಂತದರಾಗ ಹೆಣ್ಣುಮಗಳಿಗಿ ಸಾಲಿ ಕಲಿಸ್ತೇನು ನೀನು? ನೋಡಿದವ್ರು ನಗ್ತಾರ ಆಟೇ" (ಪು.೧೨೭)

ಶಾಂತಿಯ ತಾಯಿಗೆ ನಮ್ಮಂತಹ ಕೆಳಜಾತಿಯ ಜನರು ವಿದ್ಯೆ ಕಲಿಯುವುದು ಅಪರಾಧ, ವಿದ್ಯೆ ಎನ್ನುವುದು ಮೇಲ್ವರ್ಗದವರಿಗೆ ಮಾತ್ರ ಎಂದು ತಿಳಿದಿರುತ್ತಾಳೆ. ನಮ್ಮ ಜಾತಿಯಲ್ಲಿ ಗಂಡು ಮಕ್ಕಳಿಗೆ ವಿದ್ಯೆ ಕಲಿಸುವುದಿಲ್ಲ ಅದರಲ್ಲಿ ನನ್ನ ಮಗಳು ಶಾಂತಿ ಶಾಲೆಗೆ ಹೋದರೆ ಮೇಲ್ವರ್ಗದವರು ಆಡಿಕೊಳ್ಳುತ್ತಾರೆ ಎಂದು ಮನದಲ್ಲಿ ಅಂದುಕೊಳ್ಳುತ್ತಾಳೆ.

ಶರಣಮ್ಮಳಿಗೆ ಮತ್ತೊಂದು ಬಲವಾದ ಸಮಸ್ಯೆಯುಂಟಾಗುತ್ತದೆ ಎಂದುಕೊಳ್ಳುತ್ತಾಳೆ. ಶಾಂತಿ ಏನಾದರೂ ವಿದ್ಯೆ ಕಲಿತರೆ ಅವಳು ವಿದ್ಯೆಕಲಿತವಳು ಎಂದು ಅವರ ಜಾತಿಯವರು ಅವಳನ್ನು ಮದುವೆಯಾಗಲು ಮುಂದೆ ಬರುವುದಿಲ್ಲ ಎಂದು ಮಗಳನ್ನು ವಿದ್ಯೆಕಲಿಯುವುದು ಬೇಡ ಎಂದು ನೋವಿನಿಂದ ಹೇಳುತ್ತಾಳೆ.

ಈ ಮೆಲ್ವರ್ಗದವರು ಕೆಳವರ್ಗದವರನ್ನು ಪ್ರಾಣಿಯನ್ನು ಕಾಣುವ ರೀತಿಯಲ್ಲಿ ಕಾಣುತ್ತಾರೆ? ಈ ಶೂದ್ರ ಜನರು ಇರುವುದೇ ಮೇಲ್ವರ್ಗದ ಜನರ ಸೇವೆ ಮಾಡಲು ಈ ಶೂದ್ರ ಮುಂಡೇವು ಇರುವುದು. ಹೊಲಸನ್ನು ತಿನ್ನಲು ಇವರು ಹುಟ್ಟಿರುವುದು ಎಂದು ಬ್ರಾಹ್ಮಣ ಮಹಿಳೆಯರು ಮಾತನಾಡಿಕೊಳ್ಳುತ್ತಾರೆ. ಈ ಕೆಳಜಾತಿಯ ಜನರು ವಿದ್ಯೆ ಕಲಿತು ಪ್ರಜ್ಞಾವಂತರಾದರೇ ಮೇಲ್ವರ್ಗದವರು ಮಾಡುವ ಅನಾಚಾರಗಳು ಬಯಲಾಗುತ್ತವೆ. ಎನ್ನುವ ಭಯದಿಂದ ಕೆಳಜಾತಿಯವರು ಪ್ರಜ್ಞಾವಂತರಾಗುವುದನ್ನು ತಡೆಯಲು ಒಂದಲ್ಲಾ ಒಂದು ಕುತಂತ್ರಗಳನ್ನು ಹೂಡಿ ಮುಗ್ಧ ಜನರಿಗೆ ನಂಬಿಸಿ ಈ ಜನರ ಏಳಿಗೆಗಳಿಗೆ ಕಲ್ಲು ಹಾಕುತ್ತಿರುತ್ತಾರೆ. ಅದರ ಪ್ರಭಾವದಿಂದಲೇ ಶರಣಮ್ಮ ಮಗಳಿಗೆ ವಿದ್ಯೆ ಕಲಿಸಲು ನಿರಾಕರಿಸುತ್ತಾಳೆ. ಆದರೆ ಶಾಂತಿ ತನ್ನ ಬಡತನ ನೋವು, ಹಸಿವು ಅವಮಾನ ಸಂಕಟಗಳ ಮದ್ಯೆಯೇ ವಿದ್ಯೆಯನ್ನು ಕಲಿತು ಹೈಸ್ಕೂಲು ಸೇರಿದಳು. ಪುಸ್ತಕಗಳನ್ನು ಕೊಂಡುಕೊಳ್ಳಲು ಹಣವಿಲ್ಲದಿದ್ದಾಗ ಹಿರಿಯ ವಿದ್ಯಾರ್ಥಿಗಳಿಂದ ಪುಸ್ತಕವನ್ನು ಕೇಳಿ ಸಂಗ್ರಹಿಸಿಕೊಂಡು ಹೇಗೋ ಹತ್ತನೇಯ ತರಗತಿ ಪಾಸಾದಳು. ಶಾಂತಿ ಶಾಲೆಗೆ ಹೋಗುವಾಗ ಬೇಸಿಗೆಯ ಕಾಲ, ಕಲಬುರ್ಗಿಯ ಬಿಸಿಲು ಚಪ್ಪಲಿ ಇಲ್ಲದೆ ಶಾಂತಿಯ

ಕಾಲುಗಳು ಬೊಬ್ಬೆ ಬರುತ್ತಿದ್ದವು. ನಿಗಿ ನಿಗಿ ಕೆಂಡದಂತೆ ಸುಡುವ ರಸ್ತೆಯ ಮೇಲೆ ಬರಿಗಾಲಿನಿಂದ ಶಾಂತಿ ನಡೆಯುತ್ತಿದ್ದರೆ ಎಳೆಯ ಕಾಲುಗಳು ಬೆಂಕಿ ತುಳಿದಂತೆ ಕೆಂಪಾಗಿ ಉರಿಯುತ್ತಿದ್ದವು ಇದನ್ನು ಶಾಂತಪ್ಪನಿಗೆ ಹೀಗೆ ಹೇಳುತ್ತಾಳೆ.

"ನನಗೆಡ್ಡು ಚಪ್ಪಲಿ ಈಸಕುಡು ಬಾಬಾ... ಬಿಸಿಲಾಗ ಬರೇಗಾಲಿಲೇ ನಡ್ದು ಅಂಗಾಲಿಗಿ ಗುಳ್ಳಿ ಬಂದು ಉರೀ ಕತ್ತಾದ ಇಗಾ ನೋಡು"(ಪು.೧೩೬) ಶಾಂತಿಯ ಬಡತನ ಎಷ್ಟಿತ್ತೆಂದರೆ ಅವಳಿಗೆ ಒಂದು ಜೊತೆ ಚಪ್ಪಲಿ ಸಹ ಇರುವುದಿಲ್ಲ ಅವಳಿಗೆ ಎಲ್ಲದಕ್ಕಿಂತ ಮಿಗಿಲಾಗಿ ತನ್ನ ತಂದೆ ವಿದ್ಯೆ ಕಲಿಸುತ್ತಿದ್ದಾರೆ ಎನ್ನುವ ಖುಷಿ ಬಹಳವಿರುತ್ತದೆ.

ಶಾಂತಿ ಶಾಲೆಯಲ್ಲಿ ಬಹಳ ಚುರುಕ್ಕಾಗಿ ಇರುತ್ತಾಳೆ ತನ್ನ ಎಲ್ಲಾ ಕಷ್ಟಗಳನ್ನು ಮೆಟ್ಟಿನಿಂತು ಅವರ ಶಾಲಾ ಶಿಕ್ಷಕಿಯ ಜೊತೆ ಒಳ್ಳೆಯ ವಿದ್ಯಾರ್ಥಿ ಎನಿಸಿಕೊಳ್ಳುತ್ತಾಳೆ. ಬ್ರಾಹ್ಮಣ ಹುಡುಗಿಯರಿಗಿಂತ ಶಾಂತಿ ಓದಿನಲ್ಲಿ ಮುಂದೆ ಇರುತ್ತಾಳೆ. ಶಿಕ್ಷಕಿಯು ಬೇರೆ ಮಕ್ಕಳಿಗೆ "ಶಾಂತಿದು ನೋಡಿ ಕಲೀರಿ... ಅಕಿ ಎಷ್ಟು ಛೊಲೋ ಓದ್ತಾಳ..." ಎಂದು ಹೇಳುತ್ತಿದ್ದರು. ಇದರಿಂದ ಬೇರೆ ಹುಡಿಗಿಯರಿಗೆ ಶಾಂತಿಯ ಬಗ್ಗೆ ಹೊಟ್ಟೆಕಿಚ್ಚು ಹುಟ್ಟಿಸುತ್ತಿತ್ತು. (ಪು. ೧೩೭) ಶಾಂತಿಯನ್ನು ತಮ್ಮ ಆಟಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ ಅವಳು ತೊಡುವ ಹರಕು ಅಂಗಿಯ ಬಗ್ಗೆ ಮತ್ತು ಊಟದ ಡಬ್ಬಿಯ ಬಗ್ಗೆ ಶಾಂತಿಯ ಗೆಳತಿಯರು ಅಪಹಾಸ್ಯ ಮಾಡುತ್ತಿದ್ದರು.

"ಹರಕ ಅಂಗಿ ಉಟಗೊಳ್ಳಕಿಗೆ ನೋಡ್ರೇ ಏಟರೆ ಸೊಕ್ಕಾದಾ... ನಮ್ಮಂಗ ಹೊಸ ಹೊಸ ಪ್ರಾಕು ತೊಗೊಂಡು ಉಟಗೊಂಡ್ರ ಅಕಿನಾ ಕಾಲು ನೆಲದ ಮ್ಯಾಲ ನಿಂದರ್ತಿರಲಿಲ್ಲಂತ ಕಾಣಸ್ತಾದ. ಹಕ್ಕಿಹಾಂಗ ಆಕಾಸದಾಗೇ ಹಾರ್ಯಾಡತ್ತಿದ್ದಳೂ ಏನೋ..." (ಪು.೧೩೭) ಶಾಂತಿಯು ತುಂಬಾ ಬಡತನದಿಂದ ಒಳ್ಳೆಯ ಬಟ್ಟೆಗಳು ಅವಳಲ್ಲಿ ಇರಲಿಲ್ಲ ಆದ್ದರಿಂದ ಹರಿದ ಮತ್ತು ತ್ಯಾಪೆ ಹಚ್ಚಿದ ಬಟ್ಟೆಗಳನ್ನು ಧರಿಸುತ್ತಿದ್ದಳು. ಅದಕ್ಕಾಗಿ ಬ್ರಾಹ್ಮಣ ಹುಡುಗಿಯರು ಶಾಂತಿ ಶಾಲೆಯಲ್ಲಿ ಚೆನ್ನಾಗಿ ಓದುತ್ತಿರುವುದನ್ನು ಕಂಡು ಮತ್ತು ಅವರಿಗಿಂತ ಬಹಳ ಬುದ್ಧಿವಂತಳಾಗಿದ್ದಾಳೆ ಎಂದು ಶಿಕ್ಷಕಿ ಹೇಳಿದ್ದರಿಂದ ಕೆಳಜಾತಿಯವಳಾದ ಶಾಂತಿಯನ್ನು ಮಾತಿನಲ್ಲೇ ಅವಳಿಗೆ ಚೂರಿ ಇರಿತಗಳಂತಹ ನೋವು ಕೊಡುವುದನ್ನು ಕಾಣಬಹುದು.

"ಶಾಂತೀ ಇವತ್ತನೂ ಪುಸ್ತಕ ತಂದಿಲ್ಲೇನು? "ಕೇಳಿದರು ಸಿಟ್ಟಿನಿಂದ ಶಾಂತಿ ಎದ್ದು ನಿಂತಳು ಯಾಕೆ ತಂದಿಲ್ಲ? ದಿನಾ ನಿನಗ ಪನಿಶ್‌ಮೆಂಟ್ ಕೊಟ್ಟೊ ಕೊಟ್ಟೊ ಸಾಕಾಯ್ತು ಹಿಂಗಾದ್ರ ನೀ ನಾಳೆಯಿಂದ ಸಾಲಿಗಿ ಬರಬ್ಯಾಡ ಬಿಟ್ಟು ಬಿಡು ಸಾಲಿಕ ಲ್ಯಾದು ನಿಮ್ಮಂಥವರಿಗಲ್ಲ ಸಾಲಿ..." (ಪು. ೧೫೪) ಶಾಂತಿ ಆರನೇ ತರಗತಿ ಓದುತ್ತಿರುವಾಗ

ಶಾಲೆ ಶುರುವಾಗಿ ಹನ್ನೆರಡು ದಿನಗಳಾಗಿರುತ್ತದೆ. ಶಾಂತಿ ಇನ್ನೂ ಪುಸ್ತಕಗಳನ್ನು ತೆಗೆದುಕೊಂಡಿರುವುದಿಲ್ಲ. ಅದಕ್ಕಾಗಿ ಶಾಲೆಯಲ್ಲಿ ಶಿಕ್ಷಕಿ ಶಾಂತಿಗೆ ಬೈದು ಅವಳ ಕೈಗಳಿಗೆ ಬೊಬ್ಬೆ ಬರುವ ಹಾಗೆ ಹೊಡೆಯುತ್ತಾರೆ. ನಿನ್ನಂಥ ಕೆಳಜಾತಿಯವರಿಗೆ, ಬಡವರಿಗೆ ಓದು ಯಾಕೆಬೇಕು ಎಂದು ಚುಚ್ಚು ಮಾತನಾಡುತ್ತಾರೆ.

"ಶಾಂತಿ ನನ್ನ ಕೈ ಮುರಿತಾದ್ರೀ... ಹೊಡಿಬ್ಯಾಡ್ರೀ ನಾ ಸಾಯ್ತೀನ್ರೀ ಟೀಚರ್ ಎಂದು ಕಿರುಚಿದರು ಬಿಡದೇ ಹೊಡೆಯುತ್ತಾರೆ ಕೊನೆಗೆ ಶಾಂತಿ ಪ್ರಜ್ಞೆ ತಪ್ಪಿ ಬೀಳುತ್ತಾಳೆ." (ಪು. ೧೫೯) ಕರುಣೆಯಿಲ್ಲದ ಟೀಚರ್ ಶಾಂತಿಗೆ ಚಿತ್ರಹಿಂಸೆ ಕೊಡುತ್ತಾರೆ. ಇದಕ್ಕೆ ಕಾರಣ ಶಾಂತಿಯ ದಾರಿದ್ರ್ಯ ಜಾತಿ ವ್ಯವಸ್ಥೆ ಬಡತನದಿಂದ ಈ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದಳು.

ಬಡತನದಿಂದಾಗಿ, ಜಾತಿಯಿಂದಾಗಿ, ಶಾಂತಿಯ ಬಾಲ್ಯ ನಲುಗುತ್ತಿತ್ತು ನಿಜ ಆದರೆ ಅದು ಯಾರ ಗಮನಕ್ಕೂ ಬರುತ್ತಿರಲಿಲ್ಲ. ಶಾಂತಿ ಶಾಲೆಯಲ್ಲಿ ನಡೆದ ಯಾವ ಘಟನೆಗಳನ್ನು ತನ್ನ ಮನೆಯಲ್ಲಿ ಹೇಳುತ್ತಿರಲಿಲ್ಲ ಏಕೆಂದರೆ ತಾಯಿ ಶರಣಮ್ಮ ಶಾಲೆಯನ್ನು ಬಿಡಿಸುವಳು ಎಂದು ಎಲ್ಲ ನೋವನ್ನು ಶಾಂತಿಯೊಬ್ಬಳೇ ಅನುಭವಿಸುತ್ತಿದ್ದಳು.

"ಇದೇನೋ ವಸಂತಾ... ಆ ಸೂದ್ರ ಮುಂಡೇದಕ್ಕೇ ನಮ್ಮ ಹುಡ್ರ ಜೋಡಿ ಕುಂತು ಓದಂತ ಹೇಳ್ತೀ? ಸುಡ್ಲಿ... ಅದಕ್ಯಾಕ ಬಾ ಅಂದ್ಯೋ? ಹಿಟ್ಟೂ ಬೂದಿ ಒಂದೇ ಮಾಡ್ಲಿಕ್ಕ ಹೊಂಟಯಲ್ಲ ಕೊಡಿ" (ಪು. ೧೫೯) ಎಂದು ಸಿಡುಕುತ್ತಾಳೆ. ಶಾಂತಿಯ ಮನೆಯಲ್ಲಿ ಕಂದೀಲು(ಲೈಟು) ಇರುವುದಿಲ್ಲ ಚಿಮಣಿ ಬೆಳಕಿನಲ್ಲಿ ಶಾಂತಿಗೆ ಓದಲು ಕಷ್ಟವಾಗುತ್ತಿತ್ತು. ಇದನ್ನು ಅರಿತ ವಸಂತರಾವ್ ತಮ್ಮ ಮನೆಯ ಅಂಗಳದಲ್ಲಿ ಅವರ ಮಕ್ಕಳ ಜೊತೆ ಬಂದು ಓದಲು ಮತ್ತು ಬರೆಯಲು ಹೇಳುತ್ತಾರೆ. ಆದರೆ ವಸಂತರಾವ್ ಅಕ್ಕ ಸುಂದ್ರಬಾಯಿ ಶಾಂತಿ ಬಂದು ತಮ್ಮ ಮಕ್ಕಳ ಜೊತೆ ಕುಂತಿದ್ದನ್ನು ಸಹಿಸದೇ ನಮ್ಮ ಹುಡುಗರ ಜೋಡಿ ಸರಿಸಮಾನವಾಗಿ ಕುಳಿತುಕೊಳ್ಳುವ ಧೈರ್ಯ ಬಂತಾ ನಿನಗ ಹಿಟ್ಟು ಮತ್ತು ಬೂದಿ ಒಂದೇ ಎಂದು ಶಾಂತಿಯ ಮೇಲೆ ಸಿಡುಕುತ್ತಾಳೆ. ಇದರಿಂದ ಶಾಂತಿ ಥರಥರನೆ ನಡುಗಿ ಹಿಂದಕ್ಕೆ ಸರಿಯುತ್ತಾಳೆ. ಮೇಲ್ವರ್ಗದವರು ದಲಿತರನ್ನು ಯಾವ ರೀತಿಯಲ್ಲಿ ಕಾಣುತ್ತಿದ್ದರು ಎಂದು ನೋಡಬಹುದು.

"ಏ ಶಾಂತಿ... ನಮ್ಮ ಹುಡ್ರು ಜೋಡಿ ಕೂಡಬ್ಯಾಡ... ದೂರಸರಿ ಅಕಾಡಿ ಅವರಿಗೆ ಮುಟ್ಟಿಗಿಟ್ಟಿ ನೋಡು ಹುಷಾರ್..." (ಪು. ೧೬೦) ಎಂದಾಗ ಶಾಂತಿ ನಲುಗುತ್ತಾಳೆ ಬೆಳೆಯುವ ಬೆಳೆಯನ್ನು ಮೊಳಕೆಯಲ್ಲೇ ಚಿವುಟುವ ಕಾರ್ಯವನ್ನು ಸುಂದ್ರಬಾಯಿಯಂತವರು ಸಾಕಷ್ಟು ಜನ ಶಾಂತಿಯ ಬಾಳಲ್ಲಿ ಬಂದು ಅವಳ ಕನಸುಗಳನ್ನು

ಚಿವುಟುವ ಕೆಲಸವನ್ನು ಮಾಡಿದರು ಅಂತಹ ಎಲ್ಲ ಸವಾಲುಗಳನ್ನು ಮೆಟ್ಟಿ ನಿಲ್ಲುತ್ತಾಳೆ. ಶಾಂತಿ ಮನಸ್ಸಿನಲ್ಲಿ ಆಕ್ರೋಶ ಸಿಡಿದೇಳುವ ಎಲ್ಲ ಲಕ್ಷಣಗಳಿದ್ದರೂ ಅವಳು ತನ್ನ ತಾಯಿ ಮತ್ತು ಸುತ್ತಲಲ್ಲಿರುವ ಜನರಿಂದ ಅವುಗಳನ್ನು ವ್ಯಕ್ತಪಡಿಸಲು ಸಾಧ್ಯವಾಗುವುದಿಲ್ಲ. ಆ ಬ್ರಾಹ್ಮಣ ಹಿರಿಯ ಮಹಿಳೆ ಸುಂದ್ರಾಬಾಯಿ" ಏ ಶಾಂತೀ ತಗೋ ಒಂದೀಟು ಉಪ್ಪಿಟ್ಟು ಉಳದಾದ ತಿನ್ನು... ಅಂತ ಕರೆಯುತ್ತಿದ್ದಳು. ಶಾಂತಿ ಎದ್ದು ಹೋಗಿ ಅವಳ ಮುಂದೆ ಬೊಗಸೆ ಒಡ್ಡಿ ನಿಂತರೆ ಆ ಮಡಿ ಹೆಂಗಸು ಮೇಲಿನಿಂದಲೇ ಧೋಪ್ಪಂತ ಅದನ್ನು ಅವಳ ಬೊಗಸೆಗೆ ಹಾಕುತ್ತಿದ್ದಳು. ಮೇಲಿನಿಂದ ಜೋರಾಗಿ ಹಾಕಿದ ರಭಸಕ್ಕೆ ಶಾಂತಿಯ ಕೈಯಿಂದ ಒಮ್ಮೆ ಅದು ಜಾರಿ ಕೆಳಬಿದ್ದು ಉಪ್ಪಿಟ್ಟೆಲ್ಲಾ ಚೆಲ್ಲಾಪಿಲ್ಲಿಯಾಗುತ್ತಿತ್ತು." ಆಗ ಮತ್ತೆ ಸುಂದ್ರಬಾಯಿಯ ಬೈಗುಳು ಶುರು. 

"ಅಯ್ಯಾ ಸುಡ್ಲೀ... ಕೊಟ್ಟಿದ್ದು ಗಟ್ಯಾಗಿ ಹಿಡ್ಕೊಳ್ಳಾಕೂ ಬರಂಗಿಲ್ಲಲ್ಲ ನಿನಗ... ಮ್ಯಾಲಿಂದೆಲ್ಲಾ ಬಳ್ಕೊಂಡು ಪತ್ರೋಳ್ಯಾಗ ಹಾಕೊಂಡು ತಿನ್ನು... ಕೆಳಗಿಂದು ಬಳ್ದು ನೀರ್ಹಾಕಿ ತೊಳ್ದು ಬಟ್ಟಿಲಿಂದ ನೆಲಾ ಒರ್ಸಿಬಿಡು, ಕೋಡಿನ ತಂದು ನಡು ಮನಿಗೆಂತ..." (ಪು. ೧೬೦) ಅಂತ ಬೈಯುತ್ತಿದ್ದಳು. ಅಲ್ಲಿ ಸುತ್ತ ನೆರೆದಿದ್ದ ಹುಡುಗರೆಲ್ಲ ಕಿಸಿ ಕಿಸಿ ನಗುತ್ತಿದ್ದವು ಶಾಂತಿಗೆ ಅವಮಾನದಿಂದ ಅಳು ಬರುತ್ತಿತ್ತು. ಉಪ್ಪಿಟ್ಟು ಬಳಿದು ಚೆಲ್ಲಿ ನೆಲ ತೊಳೆದು ಒರೆಸಿ ಬಂದುಕೊಡುತ್ತಿದ್ದಳು" ಯಾಕೇ ಪೋರೀ... ಉಪ್ಪಿಟ್ಟು ಮ್ಯಾಲಿಂದು ಬಳ್ಕೊಂಡು ತಿನು ಅಂದರ ತಿನ್ನಲಿಲ್ಲಾ? ಎಷ್ಟು ಸೊಕ್ಕಂತೀನಿ ನಿನಗಾ... ಅದಕ್ಕೇ ದೇವರು ನಿಮಗಾ ಅನ್ನಕ್ಕಾ ಹರದಾರಿ ದೂರಿಟ್ಟಾನ ನೋಡು ಅನ್ನದ ಮ್ಯಾಲ ಸೊಕ್ಕತೋರಿಸ್ತಿರೇನು? ತಡಿ, ನಿಮ್ಮವ್ವಗ ಹೇಳಿ ನಿನಗ ಭಜನಿ ಮಾಡಿಸ್ತೀನಿ..." ಅನ್ನುತ ಅಲ್ಲಿಂದಲೇ ಜೋರಾಗಿ ಶರಣಮ್ಮನನ್ನು ಕೂಗಿ ಕರೆದು ಒಂದಕ್ಕೆ ನಾಲ್ಕು ಮಾಡಿ ಶಾಂತಿಯ ಮೇಲೆ ಚಾಡಿ ಹೇಳುತ್ತಿದ್ದಳು. ಶರಣಮ್ಮ ಮಗಳ ಬೆನ್ನಿಗೊಂದು ಗುದ್ದಿ ನಡೀ... ನೀ ಓದದೂ ಸಾಕು ಬರ್‍ಯಾದು ಸಾಕು.. ದೊಡ್ಡವರು ಹೇಳಿದಾಂಗ ಕೇಳಾಕ ಬರಂಗಿಲ್ಲಾ ನಿನಗ? ಅನ್ನುತ ಅವಳ ಕೈ ಹಿಡಿದು ದರದರನೆ ಎಳೆಯುತ್ತಾ ಮನೆಗೆ ಕರೆದೊಯ್ಯುತ್ತಿದ್ದಳು." (ಪು. ೧೬೦)

ಶಾಂತಿಯ ಎಳೆಯ ಮನಸ್ಸಿನ ಮೇಲೆ ಬರೆಯನ್ನು ಎಳೆದಂತೆ ಇಂತಹ ಘಟನೆಗಳು ಅವಳ ನೋವನ್ನು ಕೆದಕಿ ಕೆದಕಿ ತೋರಿಸುತ್ತವೆ. ಶಾಂತಿಗೆ ಆ ಸುಂದ್ರಬಾಯಿ ಮೇಲೆ ಸಿಟ್ಟು ಸಿಡುಕುಗಳು ಇದ್ದರೂ ಅವಳಿಗೆ ಏನು ಮಾಡದ ಸ್ಥಿತಿಯಲ್ಲಿ ತನ್ನ ನೋವನ್ನು ಅನುಭವಿಸುತ್ತಿದ್ದಳು. ಕಣ್ಣಿನಲ್ಲಿ ತರತರನೆ ನೀರನ್ನು ಸುರಿಸುತ್ತಿದ್ದಳು. ಇಂತಹ ಅವಮಾನ ನೋವುಗಳೇ ಅವಳ ಬರವಣಿಗೆಗೆ ಪ್ರೇರಣೆಗಳಾಗಿವೆ.

ಹೈಸ್ಕೂಲ್‌ನಲ್ಲಿ ಕಾಡಮ್ಮ ಟೀಚರ್ ಎಂಬುವವರು ಇದ್ದರು. ಅವರು ಲಿಂಗಾಯತ ಜಾತಿಯವರು, ಅವರಿಗೆ ಒಂದು ಕೈಯೇ ಇರಲಿಲ್ಲ ಬರ್ರಿ ರಟ್ಟೆ ಮಾತ್ರ ಇತ್ತು. ಅವರು ಬಹಳ ಗರ್ವದ ಹೆಣ್ಣುಮಗಳಾಗಿದ್ದಳು. ಕಠಿಣ ಹೃದಯದವಳಾಗಿದ್ದಳು. ಅವರ ಶಾಲೆಯಲ್ಲಿ ಶಾಂತಿ ಓದುತ್ತಿದ್ದಳು. ಶಾಂತಿ ತೀರ ಬಡವಳು, ಮತ್ತು ಕೆಳವರ್ಗದ ಹುಡುಗಿಯಾಗಿದ್ದರಿಂದ ಅವಳು ಹೆಚ್ಚಾಗಿ ಅವಮಾನಕ್ಕೆ ಒಳಗಾಗುವುದನ್ನು ಕಾಣಬಹುದು.

“ಭಂಗಿ ಕೆಲಸಕ್ಕ ಬಂತು ನೋಡು ಬುಲಾವ್... ಚಂಬೂದಾಗ ನೀರ ತುಂಬ್ಕೊಂಡೊಯ್ದು ಸಂಡಾಸ್‌ನ್ಯಾಗಿಟ್ಟು ಬಾರೇ ಶಾಂತೀ...” (ಪು. ೧೯) ಪಾಪ ಕಾಡಮ್ಮ ಟೀಚರಿಗೆ ಸಂಡಾಸ ಬಂದಾದಂತ... ಶಾಂತಿ ಕಾಡಮ್ಮ ಟೀಚರ್‌ನಿಂದ ಬಹಳ ನೋವನ್ನು ಅನುಭವಿಸುತ್ತಿದ್ದಳು. ಶಾಂತಿಯ ಮನಸ್ಸಿನಲ್ಲೇ ನಾನು ಎಲ್ಲರ ಹಾಗೆ ವಿದ್ಯಾರ್ಥಿನಿ, ಈ ಕಾಡಮ್ಮ ಶಿಕ್ಷಕಿ ಯಾರಿಗೂ ಶೌಚಲಾಯಕ್ಕೆ ನೀರು ತರಲು ಹೇಳುವುದಿಲ್ಲ. ನನಗೆ ಯಾಕೆ ಹೇಳುತ್ತಾರೆ. ಅವರು ಹೇಳುವ ಕೆಲಸ ನಾನೇಕೆ ಮಾಡಬೇಕು ಎಂದು ತನ್ನಲ್ಲಿಯೇ ಪ್ರಶ್ನೆಯನ್ನು ಹಾಕಿಕೊಳ್ಳುತ್ತಿದ್ದಳಾದರೂ ಅದನ್ನು ಯಾವತ್ತು ಜಾರಿಗೆ ತರಲು ಆಗುವುದಿಲ್ಲ. ಶಾಂತಿ ಯಾವುದೇ ಶಿಕ್ಷಕಿಯ ತರಗತಿಯಲ್ಲಿ ಪಾಠ ಕೇಳುತ್ತಿದ್ದರು. ಕಾಡಮ್ಮ ಶಿಕ್ಷಕಿ ಶೌಚಾಲಯಕ್ಕೆ ಹೋಗಬೇಕೆಂದರೆ ಶಾಲೆಯ ಒಳ ವರಾಂಡದಲ್ಲಿ ನಿಂತು ಗಟ್ಟಿಯಾಗಿ ಶಾಂತೀ... ಅಂತ ಕರೆಯುತ್ತಿದ್ದರು. ಇದನ್ನು ಕೇಳಿಸಿಕೊಂಡ ಶಾಂತಿ ಕ್ಲಾಸ್‌ನಲ್ಲಿಯ ಪಾಠ ಬಿಟ್ಟು ನಿಧಾನವಾಗಿ ಎದ್ದು ನಿಂತು. ಟೀಚರ್ ಮುಖ ನೋಡುತ್ತಿದ್ದಳು. ಕಂಗಲಾಗಿ ಕ್ಲಾಸಿನಲ್ಲಿ ಸಹ ಪಾಠಿಗಳು ವ್ಯಂಗದ ನಗು, ಗುಸು ಗುಸು ಮಾತುಗಳಿಂದಾಗಿ ಶಾಂತಿಯ ಕಣ್ಣಗಳಲ್ಲಿ ನೀರು ದಟ್ಟೆಸುತ್ತಿದ್ದವು. ಮತ್ತೆ, ಎರಡು ಮೂರು ಸಲ ಕಾಡಮ್ಮ ಶಿಕ್ಷಕಿಯು ಶಾಂತಿ ಎನ್ನುವ ಧ್ವನಿ ಕೇಳಿ ಬರುತ್ತಿತ್ತು.

“ಶಾಂತಿ ಓಡಿ ಹೋಗುತ್ತಾ ಬಂದ್ನಿ ಟೀಚರ್” ಎಂದು ವಿನಯದಿಂದಲೇ ಅವರಿಗೆ ಚೊಂಬಿನಲ್ಲಿ ನೀರನ್ನು ತುಂಬಿಕೊಂಡು ಹೊಯಿದು ಕೊಡುತ್ತಿದ್ದಳು. ಶಾಂತಿಯು ತನ್ನ ಬಾಲ್ಯದಲ್ಲಿ ಸಾಕಷ್ಟು ಅವಮಾನ, ಅಪಮಾನ, ನೋವು ಸಂಕಷ್ಟಗಳನ್ನು ಅನುಭವಿಸಿ ತನ್ನ ಸಾಧನೆಯ ಶಿಖರವನ್ನು ಏರಿದ್ದಾಳೆ. ಈ ಶಿಕ್ಷಕಿ ವಿದ್ಯೆಯನ್ನು ಕಲಿಸುವ ಗುರುವಾಗಿ ಶಾಲೆಯಲ್ಲಿಯೇ ಮಕ್ಕಳ ಮಧ್ಯೆ ಬೇಧಭಾವ ಹುಟ್ಟಿಸುವಂತಹ ಕೆಲಸವನ್ನು ಮಾಡುತ್ತಿರುವುದನ್ನು ಗಮನಿಸಬಹುದು.

ಮನುಷ್ಯ ಜಾತಿ ಎಲ್ಲವೂ ಒಂದೇ ತಿಳಿಹೇಳಬೇಕಾದ ಗುರುಗಳೇ ಈ ರೀತಿಯಾಗಿ ನಡೆದುಕೊಳ್ಳುವುದು ಸರಿ ಎನ್ನಿಸುವುದಿಲ್ಲ. ಆದರೆ ಶಾಂತಿ ಎಲ್ಲ ನೋವುಗಳನ್ನು ಎದುರಿಸುತ್ತಲೇ ಮುನ್ನುಗ್ಗುತ್ತಾಳೆ. ಶಾಂತಿ ಹತ್ತನೇ ತರಗತಿ ಪಾಸಾದ ನಂತರ ಮುಂದಿನ ವಿದ್ಯಾಭ್ಯಾಸಕ್ಕಾಗಿ ಹಣದ ಅವಶ್ಯಕತೆ ಇರುತ್ತದೆ. ಹಾಗಾಗಿ “ಟಟೂರಿಯಲ್

ಇನ್‌ಸ್ಟಿಟ್ಯೂಟ್"ನಲ್ಲಿ ಹದಿನೈದು ದಿನ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸುತ್ತಾಳೆ. ನಂತರ ಕಲ್ಬುರ್ಗಿಯ ಜಿಲ್ಲಾಧಿಕಾರಿ ಕಛೇರಿಯಲ್ಲಿ ಎರಡನೇ ದರ್ಜೆಯ ಗುಮಾಸ್ತನ ಕೆಲಸಕ್ಕೆ ಸೇರುತ್ತಾಳೆ. ಶಾಂತಿ ಟಟೋರಿಯಲ್ ಇನ್‌ಸ್ಟಿಟ್ಯೂಟ್ ಮೂಲಕ ಗುಪ್ತಾರವರನ್ನು ಹದಿನೈದು ದಿನ ಕೆಲಸ ಮಾಡಿದಕ್ಕೆ ಹಣವನ್ನು ಕೇಳುತ್ತಾಳೆ. ಅದಕ್ಕೆ ಪ್ರತಿಯಾಗಿ ಗುಪ್ತ ಈ ರೀತಿಯಲ್ಲೇ ಅವಮಾನ ಮಾಡುತ್ತಾನೆ, ಕೆಲಸ ಬಿಡುವ ಆಗಿದ್ದರೆ ಒಂದು ತಿಂಗಳ ಮೊದಲೇ ನನಗೆ ತಿಳಿಸಬೇಕು ಎಂಬ ನೆಪಯೊಡ್ಡಿ "ಊಹುಂ ಕುಡಂಗಿಲ್ಲ ಹೋಗು ಏನು ಮಾಡ್ತಿ ಮಾಡ್ಕೊ ಹೋಗು ಗೆಟ್ ಅವುಟ್" (ಪುಟ ೨೪೧) ಅಂತ ಶಾಂತಿಗೆ ಬೆದರಿಕೆಯಾಕುತ್ತಾನೆ.

ಶಾಂತಿ ಬಹಳ ಮೃದು ಸ್ವಭಾವದವಳು ಒಂಟಿ ಹೆಂಗಸು ಅವಳಿಂದ ನನಗೆ ಯಾವ ತೊಂದರೆಯಾಗುವುದಿಲ್ಲ. ಮೊದಲೇ ಬಡತನ ಅವರ ಕೈಲಿಂದ ಏನು ಅಪಾಯ ಸಂಭವಿಸುವುದಿಲ್ಲ ಎಂದು ತನ್ನ ಪ್ರತಾಪವನ್ನು ಆ ಬಡ ಕುಟುಂಬದ ಮೇಲೆ ತೋರಿಸುತ್ತಾನೆ. ಇದರಿಂದ ಶಾಂತಿಗೆ ಮುಖಕ್ಕೆ ಹೊಡೆದಂತೆ ಅವಮಾನವಾಗಿ ಕಣ್ಣೊರೆಸಿಕೊಳ್ಳುತ್ತ ತನ್ನ ಮನೆಗೆ ಹೊರಡುತ್ತಾಳೆ. ಸುಮಾರು ಅರವತ್ತರ ದಶಕದಲ್ಲಿ ಕಲಬುರ್ಗಿ ನಗರದ ಯಾವ ಕಛೇರಿಯಲ್ಲಿಯೂ ಹೆಣ್ಣು ಮಕ್ಕಳು ಕೆಲಸವನ್ನು ಮಾಡದಿದ್ದ ಸಂದರ್ಭದಲ್ಲಿ ಅದರಲ್ಲಿಯೂ ಸ್ವತಂತ್ರ್ಯವಾಗಿ ಮನೆಯ ಹೊಸ್ತಿಲು ದಾಟಿ ಹೊರಗಡೆ ತಿರುಗಾಡದ ಅವತ್ತಿನ ಸಂದರ್ಭದಲ್ಲಿ ಶಾಂತಿ ಅವರ ತಂದೆಯ ಪ್ರೋತ್ಸಾಹದಿಂದಾಗಿ ಕೆಲಸಕ್ಕೆ ಸೇರಿದಳು. ಅಕ್ಕ ಪಕ್ಕದ ಜನರ ಕಟುನುಡಿ ಟೀಕೆಗಳಿಗೆ ಗುರಿಯಾದರು ಬಂದು ಬಾಂಧವರ ವಿರೋಧ ಮನೆಯಲ್ಲಿ ತಾಯಿಯ ಗೋಳಾಟ ಸಿಡಿ–ಮಿಡಿ ಏಳುವುದು ಅವರ ಬೈಗುಳಗಳ ಸುರಿಮಳೆ, ಇವುಗಳನ್ನೆಲ್ಲಾ ದೂರತಳ್ಳಿ ಅವುಗಳನ್ನು ಲಕ್ಷಿಸದೆ ದೃಢ ನಿರ್ಧಾರದಿಂದ ಶಾಂತಿ ದಿಟ್ಟ ಹೆಜ್ಜೆಯನ್ನಿಟ್ಟುದರಿಂದಲೇ ಒಬ್ಬ ಆದರ್ಶ ಮಹಿಳೆಯಾಗಿ ಬೆಳೆದಿದ್ದು ಕಾಣುತ್ತೇವೆ.

ಶಾಂತಿ ಜಿಲ್ಲಾಧಿಕಾರಿ ಕಛೇರಿಯಲ್ಲಿ ಕೆಲಸ ಮಾಡುತ್ತಿರುವಾಗ ಕಛೇರಿ ಕೆಲಸಕ್ಕೆಂದು ಬೇರೆ ಬೇರೆ ಹಳ್ಳಿಯಿಂದ ಬಂದಂತಹ ಜನರು.

"ಈ ಕಛೇರ‍್ಯಾಗ ಹೆಣ್ಣುಮಗಳು ನೌಕರಿ ಮಾಡಾಕ ಬಂದಾಳಂತ್ರೆಪ್ಪಾ... ನೋಡಾಮಿ ಬರ‍್ರೀ... ಅಂತಾ"(ಪು.೨೪೬) ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾ ಶಾಂತಿಯ ಕೋಣೆಯ ಬಾಗಿಲ ಬಳಿನಿಂತ ಹಿಣಕಿ ಹಾಕಿ ನೋಡುತ್ತಿದ್ದರು. ಇದರಿಂದ ಶಾಂತಿಗೆ ಈ ಭೂಮಿ ಬಾಯಿಬಿಚ್ಚಿ ತನ್ನನ್ನು ನುಂಗಬಾರದೇ ಎನ್ನಿಸುವಷ್ಟು ಮುಜುಗರವಾಗುತ್ತಿತ್ತು. ಶಾಂತಿ ಶಾಲೆಗೆ ಹೋಗುವಂತಹ ಸಂದರ್ಭ ಕೆಳಜಾತಿಯಲ್ಲಿ ಗಂಡುಮಕ್ಕಳು ಕೂಡ ಶಾಲೆಗೆ ಹೋಗುವ ಸಂದರ್ಭ ಕಠಿಣ ಸಾಧ್ಯವಾಗಿತ್ತು. ಅಂಥಹ ಪರಿಸ್ಥಿತಿಯಲ್ಲಿ ಶಾಂತಿ ವಿದ್ಯೆ

ಕಲಿತು ಹತ್ತನೆಯ ತರಗತಿ ಪಾಸಾಗಿ ಕಛೇರಿ ಕೆಲಸ ಮಾಡುವುದಕ್ಕೆ ನಿಂತಿದ್ದ ಶಾಂತಿಯನ್ನು ಎಲ್ಲರೂ ಅಚ್ಚರಿಯಿಂದ ನೋಡುತ್ತಿದ್ದರು. ಬದಲಾವಣೆಯ ಗಾಳಿಯು ಬೀಸಿತು. ಕಛೇರಿ ಕೆಲಸವನ್ನು ನಿಭಾಯಿಸುತ್ತಲೇ ಕಾಲೇಜಿನ ಓದನ್ನು ಮುಂದುವರೆಸಿದಳು. ಗೆಳತಿ ಶೋಭಳೊಂದಿಗೆ ಬೆಳಿಗ್ಗೆ ಏಳು ಗಂಟೆಗೆ ಮಹಾವಿದ್ಯಾಲಯಕ್ಕೆ ನಡೆದುಕೊಂಡೇ ಹೋಗಿ ತರಗತಿಗಳಿಗೆ ಹಾಜಾರಾಗಿ ಮೂರು ತರಗತಿಗಳನ್ನು ಮುಗಿಸಿಕೊಂಡು ಗುಡ್ಡ ಹತ್ತಿ ಇಳಿದು ಎದೆಯುಸಿರು ಬಿಡುತ್ತಲೇ ಕಛೇರಿಯನ್ನು ಸೇರುವ ಹೊತ್ತಿಗೆ ಹೋದ ಜೀವ ಮರಳಿ ಬಂದಂತೆ ಆಗುತ್ತಿತ್ತು. ಒಮ್ಮೊಮ್ಮೆ ಹಾಜರಾತಿ ಪುಸ್ತಕ ಗುಂಡುರಾಯರ ಹತ್ತಿರ ಹೋದರೆ ಮುಗಿಯಿತು. ಅವರ ಚೇಂಬರಿಗೆ ಹೋಗಿ ತಡವಾದುದಕ್ಕೆ ಸೂಕ್ತ ಕಾರಣಕೊಟ್ಟು ಕ್ಷೇಮೆ ಕೇಳಿ ಸಹಿ ಮಾಡಬೇಕಿತ್ತು ಇಷ್ಟೆಲ್ಲ ಪಜೀತಿಗಳನ್ನು ಅನುಭವಿಸುತ್ತ ತನ್ನ ಓದು ಮುಂದುವರಿಸಿದಳು. ಶಾಂತಿ ಪದವಿ ಶಿಕ್ಷಣವನ್ನು ಪಡೆದ ನಂತರ ಕಛೇರಿ ಕೆಲಸಕ್ಕೆ ರಾಜೀನಾಮೆಕೊಟ್ಟು ಕಲಬುರ್ಗಿಯ ಶರಣ ಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಯ ಮಾತೋಶ್ರೀ ಮಹಾದೇವಿ ಕನ್ಯಾಪ್ರೌಢ ಶಾಲೆಯಲ್ಲಿ ಶಿಕ್ಷಕಿಯಾಗಿ ಕೆಲಸಕ್ಕೆ ಸೇರಿಕೊಂಡಳು. ಶಾಂತಿ ಎಲ್ಲಾ ಶಿಕ್ಷಕಿಯರೊಂದಿಗೆ ಹೊಂದಿಕೊಂಡಳು. ಅವಳ ಸ್ವಭಾವವೇ ಹಾಗೇ "ನೀರಿನಂತೆ ಯಾವ ಪಾತ್ರೆಗೆ ಹಾಕಿದರೂ ಅದು ತನ್ನ ಮಟ್ಟ ಕಾಯ್ದುಕೊಳ್ಳುತ್ತದೆ. ಹಾಗೆ ತನ್ನ ವಿನಯದಿಂದ ಎಲ್ಲ ಕೇಂದ್ರಿಕೃತವಾಗುತ್ತಾಳೆ. ಶಾಂತಿಯ ಇನ್ನೊಂದು ಬಗೆಯ ಜೀವನ ಶುರುವಾಗುತ್ತದೆ. ಶಾಂತಿ ಓದು, ಬರಹ ತರಗತಿ ಪಾಠಗಳಲ್ಲೇ ಹೆಚ್ಚು ಕಾಲಕಳೆಯ ತೊಡಗುತ್ತಾಳೆ.

'ಶಾಂತಿಗೆ' ಕಾದಂಬರಿಗಳನ್ನೋದುವ ಹುಚ್ಚು ಅತ್ತಿತ್ತು ಯಾವಾಗಲೂ ಶಾಂತಿಯ ಗ್ರಂಥಾಲಯದಲ್ಲಿರುವಂತೆ ಮಾಡುತ್ತಿತ್ತು. ಶಾಂತಿ ತ್ರಿವೇಣಿಯವರ ಎಂ.ಕೆ. ಇಂದಿರಾ, ಅ.ನ.ಕೃ, ತ.ರಾಸು., ಶಿವರಾಮಕಾರಂತ, ಕುವೆಂಪು, ಭಾರತೀಸುತ ಮೊದಲಾದವರ ಕಾದಂಬರಿಗಳನ್ನು ಓದಲು ಶುರುಮಾಡಿದಳು. ಇದರ ಪರಿಣಾಮದಿಂದ ತನಗೂ ಬರೆಯಬೇಕು ಎನ್ನುವ ಹಂಬಲ ಉಂಟಾಯಿತು. ಶಾಂತಿ ಸಣ್ಣ ಸಣ್ಣ ಕತೆಗಳನ್ನು ನಿಯತಕಾಲಿಕೆಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ಪ್ರಕಟವಾಗತೊಡಗಿದವು. ಆದರೆ ಕಲಬುರ್ಗಿಯಲ್ಲಿ ಒಂದು ಒಳ್ಳೆಯ ದಿನ ಪತ್ರಿಕೆಯಾಗಲಿ, ವಾರಪತ್ರಿಕೆಯಾಗಲಿ ಇರಲಿಲ್ಲ. ಏಕೆಂದರೆ ತೀರಾ ಹಿಂದುಳಿದ ಜಿಲ್ಲಾ ಪ್ರದೇಶದಲ್ಲಿ ಕಲಬುರ್ಗಿ ಒಂದಾಗಿತ್ತು. ಈ ಭಾಗದಲ್ಲಿ ಶಿಕ್ಷಣ ಪಡೆದುಕೊಳ್ಳುವವರ ಸಂಖ್ಯೆ ತೀರಾ ಕಡಿಮೆ. ಈ ಪ್ರದೇಶದ ಜನರು ಹೆಚ್ಚಾಗಿ ಬಡತನ, ಮೂಢನಂಬಿಕೆ ಮೌಢ್ಯ ಅಪೌಷ್ಟಿಕಾಂಶದಿಂದ ಬಳಲುತ್ತಿರುವುದನ್ನು ಕಾಣಬಹುದು. ಈ ಉತ್ತರ ಕರ್ನಾಟಕ ಪ್ರದೇಶದಲ್ಲಿ ಇಂದಿಗೂ ಅಸ್ಪೃಶ್ಯತೆ ಪ್ರಾಣಿಬಲಿ ದೇವದಾಸಿ ಪದ್ಧತಿ, ಜೋಗಿಣಿ ಪದ್ಧತಿಗಳು ಇಂತಹ ಅನಿಷ್ಟಪದ್ಧತಿಗಳು ತೆರೆಮರೆಯಲ್ಲಿ ನಡೆಯುತ್ತಲೇ ಇದ್ದವು.

ಶಾಂತಿ ತಾನು ಬರೆದ ಕಥೆ ಕವನಗಳ ಪ್ರಕಟಣೆಗಾಗಿ ಬೆಂಗಳೂರಿನ ಪತ್ರಿಕೆಗಳಾದ ಸುಧಾ, ತರಂಗ, ಲಂಕೇಶ್ ಮೊದಲಾದ ಪತ್ರಿಕೆಗಳಿಗೆ ಕಳುಹಿಸತೊಡಗಿದಳು. ಕೆಲವು ವಾಪಸ್ಸು ಬರುತ್ತಿದ್ದವು ಇದರಿಂದ ಶಾಂತಿಗೆ ಬೇಸರವಾಗುತ್ತಿತ್ತು. ಆದರೆ ಶಾಂತಿ ಬರೆಯುವುದನ್ನು ಮಾತ್ರ ನಿಲ್ಲಿಸಲಿಲ್ಲ.

ಶಾಂತಿಯು ಬರೆದ ಕಥೆ ಮೊಟ್ಟಮೊದಲು ಪ್ರಕಟವಾಗಿದ್ದು 'ಸುಧಾ' ಪತ್ರಿಕೆಯಲ್ಲಿ ಎಂ.ಬಿ.ಸಿಂಗ್‌ರವರು ಶಾಂತಿಗೆ ಬಹಳ ಅವಕಾಶಕೊಟ್ಟು ಪ್ರೋತ್ಸಾಹಿಸಿದರು. ಅವರ ಪರಿಚಯ ಕೇವಲ ಪತ್ರಗಳ ಮೂಲಕವೇ ಆಗಿತ್ತು. ಉತ್ತರ ಕರ್ನಾಟಕ ಭಾಗದ ಬರಹಗಾರರಿಗೆ ಪ್ರೋತ್ಸಾಹ ಕೊಡಬೇಕೆಂಬ ಒಂದೇ ಒಂದು ಉದ್ದೇಶದಿಂದ ಸಿಂಗ್ ಅವರು ಶಾಂತಿಯ ಬರಹಗಳನ್ನು ಸುಧಾ, ಪ್ರಜಾವಾಣಿಯ ಸಾಪ್ತಾಹಿಕಗಳಲ್ಲಿ ಪ್ರಕಟಿಸುತ್ತಿದ್ದರು.

ವಿದ್ಯೆ ಪಡೆಯುವುದೇ ಕಷ್ಟಸಾಧ್ಯವಾದ ಕುಟುಂಬದಲ್ಲಿ ಜನಿಸಿದ ಶಾಂತಿಯವರು ಕಷ್ಟಪಟ್ಟು ಓದುತ್ತಾಳೆ. ಕೆಲಸವನ್ನು ಮಾಡುತ್ತ ಜೊತೆಗೆ ಪದವಿ ಶಿಕ್ಷಣವನ್ನು ಪಡೆದುಕೊಳ್ಳುತ್ತಾಳೆ. ತನ್ನ ಮನೆಯ ಬಡತನ ತನ್ನ ದೌರ್ಬಲ್ಯ ಎಂದು ತಿಳಿಯದೆ. ಅದನ್ನೇ ಅಸ್ತ್ರವಾಗಿಟ್ಟುಕೊಂಡು ಓದುತ್ತಾಳೆ. ತನ್ನ ತಾಯಿಗೆ ತಾನು ಓದುವುದರಿಂದ ನೋವಾಗುತ್ತದೆ ಎಂದು ತಿಳಿದರು. ಸಹ ಅದನ್ನು ಲೆಕ್ಕಿಸದೆ ತಾನು ಅಂದುಕೊಂಡಿರುವ ಗುರಿಯನ್ನು ಮುಟ್ಟಲು ಪ್ರಯತ್ನಿಸುತ್ತಾಳೆ. ಹೀಗೆ ಶಾಂತಿ ಕಲಿತ ವಿದ್ಯೆಯ ಫಲವಾಗಿ ಮೊಟ್ಟ ಮೊದಲಬಾರಿಗೆ "ತಾವರೆಯ ಹೂವು"ಯೆನ್ನುವ ಕಾದಂಬರಿ ಪ್ರಕಟವಾಯಿತು. ಮುಂದೆ ಮಹಾಮನೆ ಚಂದನದ ಚಿಗುರು, ಮರಳಿ ಮನೆ ಅಘಾತ ಮೊದಲಾದ ಕಾದಂಬರಿಗಳು ಶಾಂತಿಯ ಲೇಖನಿಯಿಂದ ಹೊರಬಂದವು.

ಶಾಂತಿಗೆ ಸ್ನೇಹಿತರ ಸಹಾಯ ಸಹಕಾರಗಳಿಂದಲೇ ಸಾಹಿತ್ಯ ಕ್ಷೇತ್ರದಲ್ಲಿ ಕಾಲೂರ ತೊಡಗಿದಳು. ಶಾಂತಿಯು ಬರೆದ ಕಾದಂಬರಿಯ ಮೊದಲ ಓದುಗ ಮತ್ತು ವಿಮರ್ಶಕ ಅಣ್ಣಾರಾವ್ ಎಂಬುವವರೇ ಆಗಿದ್ದರು, ಶಾಂತಿ ಮೊದಲಿಗೆ ಹಸಿ ಹಸಿ ಪ್ರೇಮ ಪ್ರಣಯದ ದೊಡ್ಡ ದೊಡ್ಡ ಬಂಗಲೆಗಳನ್ನು ಕಾದಂಬರಿಯ ವಸ್ತುವನ್ನಾಗಿಟ್ಟುಕೊಂಡು ಕಾದಂಬರಿಯನ್ನು ಬರೆದಳು. ಶಾಂತಿ ಸ್ವತಂತ್ರ್ಯಳಾಗಿ ತಮ್ಮ ಕಾಲ ಮೇಲೆ ತಾವು ನಿಂತುಕೊಂಡು ಸಂತೋಷ ನೆಮ್ಮದಿಯಲ್ಲಿರುವಾಗಲೇ ಹರೆಯದ ಹೆಣ್ಣು ಒಂಟಿಯಾಗಿ ಸ್ವತಂತ್ರ್ಯವಾಗಿ ಬಾಳಲು ಬಿಡದ ಸಮಾಜದಲ್ಲಿ ಮದುವೆಯೆಂಬ ಇನ್ನೊಂದು ಹಂತಕ್ಕೆ ಕಾಲಿಡಬೇಕಾಯಿತು. "ಬಾಲ್ಯದಂತೆ ಯೌವ್ವನ ಸರಳ ಸುಂದರವಾಗಿ ನಿರಾತಂಕವಾಗಿ ಮುನ್ನಡೆಯುವುದಿಲ್ಲ. ಬಾಲ್ಯದಲ್ಲಿ ಮುಗ್ಧತೆ ಸರಳತೆ ಅವ್ಯಾಯತೆಗಳು ಹರೆಯಕ್ಕೆ ಜಿರುವುದಿಲ್ಲ. ಯೌವ್ವನದಲ್ಲಿ ಲೋಹ ಚುಂಬಕವಾದ ಆಕರ್ಷಣೆಗಳಿರುತ್ತವೆ. ಒಂದು

ಹೆಣ್ಣಿಗೆ ಒಂದು ಗಂಡು, ಒಂದು ಗಂಡಿಗೆ ಒಂದು ಹೆಣ್ಣು, ಹಿಡಿದಿಡುವ ಸಮ್ಮೋಹಕತೆ ಇದೆ. ಮುಂದೆ ನಿಂತವರನ್ನು ಮೋಡಿ ಮಾಡಿ ತನ್ನ ಗುಲಾಮನನ್ನಾಗಿಸುವ ಮೋಹಕ ಗಾರುಡಿ ಇದೆ ಬಣ್ಣದ ಕನ್ನಡಕ ಹಾಕಿಕೊಂಡೇ ನೋಡುವ ಯೌವ್ವನಕ್ಕೆ ಜಗತ್ತೆಲ್ಲ ಸುಂದರವಾಗಿರುತ್ತದೆ. ಆದರೆ ಯೌವ್ವನದಲ್ಲಿ ಶಾಂತಿಗೆ ಸಿಕ್ಕಿದ್ದು ಮಾತ್ರ ಕಹಿ ಅನುಭವಗಳೇ ಎಂದು ಹೇಳಬಹುದು. ಶಾಂತಿಯ ಮನೆಯಲ್ಲಿ ಮದುವೆ ಮಾಡಲು ವರಗಳನ್ನು ನೋಡುತ್ತಿರುತ್ತಾರೆ. ಅದನ್ನು ತಿಳಿದ ದ್ಯಾಮವ್ವ ಶಾಂತಪ್ಪನಿಗೆ ಚುಚ್ಚು ಮಾತುಗಳನ್ನು ಹೇಳುತ್ತಾಳೆ.

"ವರಗಳೇನೋ ಬರ್ತಾವಪ್ಪಾ... ಆದರ ಇಕಿಗಿ ತಕ್ಕವರಾ ಬೇಕಲ್ಲ, ಬ್ಯಾಡ ಬ್ಯಾಡಂದ್ರುನೂ ಈಟುದ್ದ ಸಾಲಿ ಕಲ್ಸಿದ್ದೀ ಮಗಳ್ಗಿ ಅಕಿಯೋಟು ಸಾಲಿ ಕಲ್ತವನಿಗೇ... ಹುಡಕಬೇಕಲ್ಲಪ್ಪಾ..." (ಪು.೪೦೩)

ಶಾಂತಿ ವಿದ್ಯೆ ಕಲಿತಿರುವುದೇ ತಪ್ಪು ಎನ್ನುವಂತೆ ದ್ಯಾಮವ್ವ ಬಿಂಬಿಸುತ್ತಾಳೆ? ಅದಕ್ಕಾಗಿಯೇ ಶಾಂತಿ ತನಗಿಂತ ಕಡಿಮೆ ಓದಿದ ಹುಡುಗನನ್ನು ಮದುವೆಯಾಗಲು ತಂದೆ ತಾಯಿಯರ ಒಪ್ಪಂದಕ್ಕೆ ಒಪ್ಪಿಕೊಳ್ಳುತ್ತಾಳೆ. ಶಿವಣ್ಣ ಎಂಬುವವರ ಜೊತೆ ಶಾಂತಿಯ ಮದುವೆ ರಜಾ ದಿನಗಳಲ್ಲಿ ಮದುವೆಯಾಯಿತು. ಮೊದ ಮೊದಲೇನೋ ಸಂಸಾರ ಸರಿಯಾಗಿಯೇ ಸಾಗಿತ್ತು. ಕಾಲಕಳೆದಂತೆ ಶಿವಣ್ಣನ ಬಣ್ಣ ಬಯಲಾಗತೊಡಗಿತು. ತಾನು ಕಡಿಮೆ ಓದಿದವನೆಂಬ ಕೀಳಿರಿಮೆ ಅವನನ್ನು ಕಾಡತೊಡಗಿರುತ್ತದೆ. ಇದರಿಂದ ಶಾಂತಿ ನಡತೆಯ ಬಗ್ಗೆ ಅನುಮಾನ ಅವನದೆಯಲ್ಲಿ ಬೆಳೆಯತೊಡಗಿರುತ್ತದೆ. ಶಾಂತಿ ಕುಂತರೆ, ನಿಂತರೆ, ನೀಟಾಗಿ ಡ್ರೆಸ್ ಮಾಡಿಕೊಂಡರೆ ಹೂವು ಮುಡಿದುಕೊಂಡರೆ ಹೀಗೆ ಪ್ರತಿಯೊಂದಕ್ಕೂ ಅವನು ಜಗಳ ತೆಗೆಯಲು ಶುರುಮಾಡತೊಡಗಿದ, ಶಾಂತಿ ಶಾಲೆಗೆ ಹೊರಟುನಿಂತರೆ ಅವಳಿಗೆ ಕೊಂಕು ಮಾತುಗಳನ್ನಾಡುವುದು ಕೆಂಗಣ್ಣಿನಿಂದ ಅವಳನ್ನು ನೋಡುತ್ತಿರುತ್ತಾನೆ. ಶಾಂತಿ ಮೊದಮೊದಲು ಇದನ್ನು ಸಹಿಸಿಕೊಂಡಳು, ಹೆಣ್ಣು ಯಾವಾಗಲೂ ಸಹನಾ ಮೂರ್ತಿ, ಕರುಣಾಮಯಿ, ಶಾಂತಿಪ್ರಿಯೆ, ಎಂದು ಅವಳನ್ನು ವರ್ಣಿಸಿ ದೌರ್ಜನ್ಯ ಎಸಗುತ್ತಾರೆ. ಹೀಗೆ ಶಾಂತಿಯ ಮೇಲೆ ಶಿವಣ್ಣ ದೌರ್ಜನ್ಯ ನಡೆಸುತ್ತಿರುತ್ತಾನೆ. ತಾನು ದುಡಿದ ಹಣವನ್ನೆಲ್ಲಾ ಕುಡಿದು ಬರುತ್ತಿದ್ದ, ಬೇರೆ ಹೆಂಗಸು ಬಳಿ ಸಂಬಂಧ ಹೊಂದಿದ್ದ ಶಾಂತಿಯ ದುಡಿಮೆಯಲ್ಲಿ ಮನೆ ಖರ್ಚು ನಿಭಾಯಿಸುತ್ತಿದ್ದಳು. ಅದರಲ್ಲಿಯೇ ಕುಡಿಯಲು ಹಣವನ್ನು ಕೇಳುತ್ತಿದ್ದ ಆದರೆ ಶಾಂತಿ ಮಾತ್ರ "ನನ್ನ ಪಗಾರದಾಗ ನಾನು ಸಂಸಾರ ನಡಸ್ತೀದ್ದೀನಿ ನೀ ಅಂತೂ ಮನಿಗೆ ಒಂದು ಪೈಸಾ ಕೊಡಾಂಗಿಲ್ಲ ನಿನ್ ಕುಡಿತಕ್ಕಿಡ್ತಿ, ಊಟಕ್ಕೆ ಹಾಕ್ತೀನಿ ಅಷ್ಟೇ" (ಪು. ೪೦೬) ಕುಡಿಯುವುದಕ್ಕೆ ಹಣ ಕೊಡುವುದಿಲ್ಲ ಎಂದು ಹೇಳುತ್ತಾಳೆ.

ಶಾಂತಿ ತವರು ಮನೆಯಲ್ಲಿ ಬಡತನದಿಂದ ನಾನಾ ಕಷ್ಟಗಳನ್ನು ಅನುಭವಿಸುತ್ತಾಳೆ. ಗಂಡನ ಮನೆಯಲ್ಲಾದರು ಸುಖ, ಮನಶಾಂತಿ, ದೊರೆಯಬಹುದು ಎನ್ನುವ ಭರವಸೆ ಇಟ್ಟುಕೊಂಡಿರುತ್ತಾಳೆ. ಆದರೆ ಶಾಂತಿಗೆ ಗಂಡನ ಜೊತೆ ಜಗಳ ಕಿರಿಕಿರಿ, ಹಾವು ಮುಂಗಸಿಗಳಂತೇ ಒಳಗೇ ದುಸುಮುಸು ಮಾಡುತ್ತ ಬೆಂಕಿಹೊತ್ತಿ ಉರಿಯಲಾರಂಭಿಸಿತು. ತಂದೆ ತಾಯಿ ಬಂದು ನಾಲ್ಕು ಐದುಸಾರಿ ರಾಜಿಮಾಡಿಸಿದರು ರಾಜಿಯಾಗಲೇ ಇಲ್ಲ. ಶಾಂತಿ ಒಂದು ದಿನ ಪಂಚಾಯ್ತಿ ಕರೆಸಿ ತನಗೆ ಶಿವಣ್ಣನಿಂದ ತಲ್ಲಾಕ್ ಕೇಳಿದಳು. ಈ ರೀತಿಯಾಗಿ ಕೇಳಿದ್ದಕ್ಕೆ ಶಾಂತಿಗೆ ಹೆಣ್ಣಾದವಳು ಎಲ್ಲ ನೋವುಗಳನ್ನು ಸಹಿಸಿಕೊಂಡು ನಡೆಯಬೇಕು ಎದು ಹೇಳುತ್ತಾರೆ. ಆದರೆ ಶಿವಣ್ಣನದು ಯಾವುದೇ ತಪ್ಪು ಇಲ್ಲ ಎನ್ನುವಂತೆ ಅವನನ್ನು ಬಿಂಬಿಸುತ್ತಾರೆ.

"ಶಿವಣ್ಣನ ತಾಯಿ ಶಾಂತಿಗೆ ಈ ರೀತಿಯಾಗಿ ಹೇಳಿದ್ದನ್ನು ಕಾಣಬಹುದು "ನೀನು ತಿಳಿದಕ್ಕಿದ್ದಿಯವ್ವ, ಬಿ.ಎ. ಪಾಸುಮಾಡಿದೋಳು ನೀನೇ ತಾಳಿಕೊಳ್ಳಬೇಕು ಶಾಂತಾ... ಎಲ್ಲಾದಕ್ಕೂ ಹೊಂದಿಕೊಂಡು ಹ್ವಾದರೇ ಸಂಸಾರ ನಡೀತಾದವ್ವ... ಎಷ್ಟಾದ್ರೂ ಹೆಣ್ಣು ಮಕ್ಕಳೇ ಸೋಲಬೇಕು ನೋಡು, ಸೋತು ಗಂಡನ ಮನಸ್ಸು ಗೆದಿಬೇಕು ನೋಡು ನಮ್ಮಂದ್ಯಾಗ ಕುಡೀಲಾರ್ದವ್ರು ಯಾರಾರ? ಒಂದೀಟು ಚಟಾ ಅಂತೀ.. ಗಂಡಸಂದ ಮ್ಯಾಲ ಅದೆಲ್ಲಾ ಇದ್ದದ್ದೇ ಬಿಡು ಎಡ್ಡು ಮಕ್ಕಳಾದ್ರು ಅಂದ್ರ ಅದೆಲ್ಲಾ ತನ್ನೋಟಕ್ಕ ತಾನೇ ನಿಂತು ಬಿಡ್ತಾದ ನಿನ್ನ ಸಂಸಾರ ಉಳಸ್ಕೊಳ್ಳಾದು ನಿನ್ ಕೈಯಾಗದ ನೋಡು ಶಾಂತಾ..." (ಪು. ೪೦೭) ಶಿವಣ್ಣನ ತಪ್ಪುಗಳೆಲ್ಲಾ ಮುಚ್ಚಿಹಾಕಿ ಅವನು ಮಾಡುವುದು ಗಂಡಸರಾದವರು ಅಂತಹ ತಪ್ಪುಗಳನ್ನು ಮಾಡಲೇಬೇಕಾದವು ಅವು ಗಂಡಸರ ಜನ್ಮಸಿದ್ಧ ಹಕ್ಕು ಎನ್ನುವಂತೆ ಮಗನ ಪರವಾಗಿ ನಿಂತು ಶಾಂತಿಗೆ ಉಪದೇಶ ಮಾಡುತ್ತಾಳೆ. ನಮ್ಮ ದೇಶದ ಹೆಣ್ಣುಮಕ್ಕಳು ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಎಷ್ಟೇ ಸಬಲಳಾಗಿದ್ದರೂ ಅವಳು ಮನೆಯಲ್ಲಿ ಮತ್ತು ಸಮಾಜದಲ್ಲಿ ಗಂಡಿನ ಅಡಿ ಆಳಾಗೇ ಇರಬೇಕೆಂದು ಈ ಪುರುಷ ಸಮಾಜ ಬಯಸುತ್ತದೆ ಎಂದರೆ ತಪ್ಪಿಲ್ಲ.

ಶಿವಣ್ಣ ದಿನರಾತ್ರಿ ಕುಡಿದು ಶಾಂತಿಯ ಮೇಲೆ ಮೃಗದಂತೆ ವರ್ತಿಸುತ್ತಾನೆ. ಇದನ್ನು ಇನ್ನೂ ನನ್ನ ಕೈಯಲಿಂದ ತಾಳ್ಮೆ ಇಂದ ಇರಲು ಸಾಧ್ಯವಿಲ್ಲ ಎಂದು ಯೋಚಿಸಿ, ತನ್ನ ಗಂಡನಿಗೆ ತಾಳಿಯನ್ನು ಬಿಚ್ಚಿ ಅವನ ಕೈಗೆ ಇಟ್ಟು ಅವನಿಂದ ವಿಚ್ಛೇದನ ಪಡೆಯುತ್ತಾಳೆ. ತಂದೆ-ತಾಯಿ ಮನೆಗೆ ಹೋಗದೇ ತಾನು ಬೇರೆ ಮನೆಯಲ್ಲಿ ಇರುತ್ತಾಳೆ. ಈ ಮದುವೆ ಮುರಿದು ಬಿದ್ದಿದ್ದರಿಂದ ಶಾಂತಿಗೆ ಇನ್ನೂ ನೋವಾಗಲಿ ದುಃಖವಾಗಲಿ ಆಗಲಿಲ್ಲ. ಆದರೂ ನೋಡುವ ಕಣ್ಣುಗಳಲ್ಲಿ ಅಳುಕು ಕಾಣುತ್ತಿತ್ತು.

ಶಾಂತಿ ಈ ಘಟನೆಯ ನಂತರ ಖೈದಿಗಳ ಹಾಗೆ ಜೀವನ ಸಾಗಿಸುತ್ತಿದ್ದಳು ಹೋದರೆ ಶಾಲೆ ಬಂದರೆ ಮನೆ, ಎನ್ನುವಾಗೇ ಒಂಟಿಯಾದಳು ಯಾರ ಬಳಿಯೂ ಹೆಚ್ಚಿಗೆ ಮಾತನಾಡುತ್ತಿರಲಿಲ್ಲ ಅವಳು ಒಂದು ರೀತಿಯಿಂದ ತನ್ನದೇ ಆದ ಒಂಟಿ ಯಾತನೆಯನ್ನು ಅನುಭವಿಸುತ್ತಿದ್ದಳು ಮಾನಸಿಕವಾಗಿ ಬಹಳ ನೋವನ್ನು ಅನುಭವಿಸುತ್ತ ಅಸ್ವಸ್ಥಳಾದಳು ಶಾಂತಿ ತನ್ನ ನೋವನ್ನೆಲ್ಲ ಮರೆಯಲು ಕಾದಂಬರಿಗಳನ್ನು ಓದತೊಡಗಿದಳು. ಆಗ ಅವಳ ಮನಸ್ಸು ಸ್ವಲ್ಪ ತಿಳಿಯಾಯಿತು. ಮತ್ತೆ ಬರೆಯಲು ಶುರುಮಾಡಿದಳು" "ಈಕೆ ರೆಗ್ಯೂಲರ್ ರೈಟರ್ ಅಲ್ಲ ಬರೆಯ ಬೇಕೆನ್ನಿಸುವ ಒಳಗಿನ ಒತ್ತಡ ಹೆಚ್ಚಾದಾಗ ಮಾತ್ರ ಬರೆಯುತ್ತಿದ್ದಳು. ಇಲ್ಲದಿದ್ದರೆ ತಿಂಗಳುಗಟ್ಟಲೆ ಬರೆಯುತ್ತಲೇ ಇರಲಿಲ್ಲ.

'ನನ್ನ ನಿನ್ನ ನಡುವೆ' 'ಸವತಿ ಶ್ರೀಗಂಧ', ಅಭಿಮಾನ, ಚೈತ್ರದ ಹಾಡು, ಸಪ್ತವರ್ಣದ ಸ್ವಪ್ನ ಮೊದಲಾದ ಅವಳ ಕಾದಂಬರಿಗಳು ಜನಪ್ರಿಯವಾಗಿದ್ದವು. ಶಾಂತಿ ಮೊದಲಿಗೆ ಬೆಂಗಳೂರು ಭಾಷೆಯಲ್ಲಿ ಕಾದಂಬರಿಗಳನ್ನು ಬರೆದಿದ್ದಳು. ತನ್ನ ಜೀವನದಲ್ಲಿ ಅನುಭವಿಸಲು ಆಗದೇ ಇರುವುದನ್ನು ಕಲ್ಪಿಸಿಕೊಂಡು ತನ್ನ ಕಾದಂಬರಿಯ ವಸ್ತುವನ್ನಾಗಿಸಿಕೊಂಡು ಐಶ್ವರ್ಯ, ಬಂಗಲೆ, ಕಾರು, ಒಡವೆ, ವಸ್ತ್ರ, ಮಾರುದ್ದ ಕೂದಲಿನ ನಾಯಕಿಯರು ತನ್ನ ಆಕಾಂಕ್ಷೆಗಳನ್ನು ಕಾದಂಬರಿಯಲ್ಲಿ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತ ಖುಷಿಪಡುತ್ತಿದ್ದಳು. ಇವರ ಕಾದಂಬರಿಗಳನ್ನು ಓದಲು ಹದಿಹರೆಯದ ಒದುಗ ಗುಂಪೇ ಹುಟ್ಟಿಕೊಂಡು ಅವಳ ಬರಹಗಳಿಗಾಗಿ ಕಾತರದಿಂದ ಕಾಯುವ ಕಾಲ ಬಂದಿತ್ತು. ಶಾಂತಿ ತನ್ನ ಒಂಟಿತನವನ್ನು ಸಾಹಿತ್ಯದೊಂದಿಗೆ ಬೆಸೆದುಕೊಳ್ಳತೊಡಗಿದಳು. ಶಾಂತಿ ಬಂಡಾಯಗಾರ್ತಿಯಾಗಿದ್ದರೂ ಮೂಲತ ಶಾಂತಿ ಪ್ರಿಯಳೇ ಆಗಿದ್ದಳು, ಶಾಂತಿಗೆ ಎಲೆಮರೆಯ ಕಾಯಿಯಂತೆ ಬಾಳುವ ಬಯಕೆ ಕಾಡತೊಡಗಿತು ಯಾರ ಕಣ್ಣಿಗೂ ಬೀಳದೆ ಬದುಕುವ ಇಚ್ಛೆ... ತಾನಾಯಿತು ತನ್ನ ಬರಹವಾಯಿತು. ರೂಮಿನಲ್ಲಿ ಕುಂತು ಬರೆಯುವುದು ಪತ್ರಿಕೆಗಳಿಗೆ ಕಳಿಸುವುದು ಇದೇ ದಿನಚರಿ ಶಾಂತಿಯದ್ದಾಗಿತ್ತು." (ಪು.೪೧೫) ಆದರೆ ಶಾಂತಿಗೆ ಇದೇ ರೀತಿಯಾಗಿ ಬಾಳಲು ವಿಧಿ ಬಿಡುವುದಿಲ್ಲ. ಶಾಂತಿ ಇಷ್ಟಪಟ್ಟು, ಇಲ್ಲವೇ ಶ್ರೀಕಾಂತನ ಮಾಯಾ ಜಾಲಕ್ಕೆ ಬಲಿಯಾಗಿ ಶಾಂತಿ ಶ್ರೀಕಾಂತನನ್ನು ಮದುವೆಯಾಗುತ್ತಾಳೆ. ಮದುವೆಯಾಗಿ ಶಾಂತಿ ಬೆಂಕಿಯಿಂದ ಬಾಣಲೆಗೆ ಬಿದ್ದಂತೆಯಾಗುತ್ತದೆ.

ಶ್ರೀಕಾಂತ ಮೊದಲೇ ಮದುವೆಯಾಗಿ ಎರಡು ಮಕ್ಕಳ ತಂದೆಯಾಗಿರುತ್ತಾನೆ. ಇವನ ಮೊದಲನೇ ಹೆಂಡತಿ 'ಮಾಯಾ' ಅವಳಿಗೆ ಮೋಸಮಾಡಿ ಬಾಂಡ್‌ಪೇಪರ್ ಮೇಲೆ ಸಹಿ ಮಾಡಿಸಿಕೊಂಡಿರುತ್ತಾನೆ. ಶಾಂತಿಗೆ ತನ್ನ ವೈವಾಹಿಕ ಜೀವನದಲ್ಲಿ ಎಷ್ಟೋ ಕಾಳಜಿವಹಿಸಿ ಕಾಲಿರಿಸಿದರೂ ಅವಳಿಗೆ ಸುಖ–ಶಾಂತಿ ದೊರೆಯುವುದಿಲ್ಲ ಶಾಂತಿಗೆ

ಚುಚ್ಚು ಮಾತುಗಳು ವ್ಯಂಗ್ಯದ ನಗುಗಳು ಬಿರುಸು ನುಡಿಗಳು ಅವಮಾನಗಳು ಶುರುವಾಗುತ್ತವೆ.

"ಅಂತೂ ಅಂವಾ ಜಾದೂ ಟೋನಾ ಮಾಡಿ ನಿನಗ ಒಳಗ ಹಾಯ್ಕೊಂಡು ಗೆದ್ದು ಬಿಟ್ಟಬಿಡು... ನಿನಗ ನಾಚಿಕಿ ಆಗ್ಬೇಕಿತ್ತು... ಲಜ್ಜಗೇಡೀ... ಎಂದು ಗೆಳತಿ ಶೋಭ ಶಾಲೆಯಲ್ಲಿ ಎಲ್ಲರ ಎದುರಿಗಿ ಬೈದು ಹೋಗುತ್ತಾಳೆ." (ಪು. ೪೫೩) ಹೆಣ್ಣೇ ಹೆಣ್ಣಿಗೆ ಶತ್ರು ಎನ್ನುವ ಹಾಗೆ ಜೀವಕ್ಕೆ ಜೀವವಾಗಿದ್ದ ಬಾಲ್ಯದಿಂದಲೂ ಒಟ್ಟಿಗೆ ಬೆಳೆದು ಬಂದ ಸ್ನೇಹದ ಬೆಸುಗೆ ಮುರಿದು ಹೋಗುತ್ತದೆ. ಶಾಂತಿ ಶ್ರೀಕಾಂತನನ್ನು ಮದುವೆಯಾಗಿದ್ದ ದೊಡ್ಡ ತಪ್ಪು ಎಂದು ತಿಳಿದು ಶೋಭ ಶಾಂತಿಯಿಂದ ದೂರ ಸರಿಯುತ್ತಾಳೆ. ಶಾಂತಿಗೆ ಬಾಲ್ಯದ ಗೆಳತಿಯನ್ನು ದೂರಮಾಡಿಕೊಂಡ ಘಟನೆ ಪದೇ ಪದೇ ನೋವುಂಟು ಮಾಡುತ್ತಿರುತ್ತದೆ.

ನೋವು ಆಗಿರುವ ಜಾಗಕ್ಕೆ ಪದೇ ಪದೇ ಪೆಟ್ಟುಗಳು ಬೀಳುವಂತೆ ಶಾಂತಿಗೆ ಒಂದರ ಹಿಂದೆ ಒಂದರಂತೆ ನೋವುಗಳ ಸರಮಾಲೆ ಅವಳಿಗೆ ದೊರೆಯುತ್ತಿರುತ್ತವೆ. ಶಾಂತಿ ಶ್ರೀಕಾಂತನನ್ನು ಮದುವೆಯಾಗಿರುವ ವಿಷಯ, ಶಾಂತಿ ಕೆಲಸ ಮಾಡುತ್ತಿದ್ದ ಶರಣಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಯ ಮಾತೋಶ್ರೀ ಮಹಾದೇವಿ ಕನ್ಯ ಪ್ರೌಢಶಾಲೆಯ ಆಡಳಿತ ಮಂಡಳಿಗೆ ತಿಳಿಯುತ್ತದೆ. ಮ್ಯಾನೇಜ್‌ಮೆಂಟ್ ಸೆಕ್ರೆಟರಿ ಶಾಂತಿಯನ್ನು ಕರೆಕಳುಹಿಸಿ, ಎಲ್ಲಾ ಸದಸ್ಯರ ಮೀಟಿಂಗ್ ನಡೆಸಿ ಶಾಂತಿಯಿಂದ ರಾಜೀನಾಮೆ ಪತ್ರ ಪಡೆಯಬೇಕು ಎಂದು ತೀರ್ಮಾನಿಸಿದ್ದನ್ನು ಹೇಳಿದರು. ಅದಕ್ಕೆ ಶಾಂತಿ ಕಾರಣ ಕೇಳಿದರೆ ನೀನು ಪುನರ್ ವಿವಾಹವಾಗಿದ್ದು, ಶ್ರೀಕಾಂತ ಮೊದಲೇ ಮದುವೆಯಾದವ ಅವನು ಮೇಲ್ ಜಾತಿಯವನಾಗಿದ್ದ ಅಂತವನನ್ನು ಮದುವೆಯಾದ ಶಾಂತಿಗೆ ಈ ರೀತಿಯ ಶಿಕ್ಷೆಕೊಡುತ್ತಾರೆ. ಶಾಂತಿಯಿಂದ ತಮ್ಮ ಶಾಲೆಗೆ ಕೆಟ್ಟ ಹೆಸರು ಬರುತ್ತದೆ ಎಂದು ಶಾಲೆಯಿಂದ ರಾಜೀನಾಮೆ ಪತ್ರಪಡೆದು ಕೆಲಸದಿಂದ ಹೊರಹಾಕುತ್ತಾರೆ. ಸಮಾಜ ಎಷ್ಟೇ ಆಧುನೀಕರಣಗೊಂಡರು ಅವರು ನಡೆಸಿಕೊಂಡು ಬರುವಂತಹ ಸಂಪ್ರದಾಯಗಳು ಮಾತ್ರ ಬದಲಾಗುವುದಿಲ್ಲ. ಆದರೆ ಶಾಂತಿ ಎಲ್ಲ ಮಹಿಳೆಯರ ಹಾಗೆ ಸಮಾಜದ ನೀತಿ ನಿಯಮಗಳನ್ನು ಅನುಸರಿಸುತ್ತ ಬದುಕನ್ನು ಸಾಗಿಸಿದರು. ಹತ್ತರಲ್ಲಿ ಹನ್ನೊಂದಾಗಿ ಬದುಕುವುದು ಶಾಂತಿಗೆ ಒಪ್ಪಿಗೆ ಇರಲಿಲ್ಲ. ಎಲ್ಲರಿಗಿಂತ ಭಿನ್ನವಾದ ನೆಲೆಯಲ್ಲಿ ನಿಂತು ವಿಶಿಷ್ಟತೆಯನ್ನು ಹೊಂದಬೇಕೆಂಬ ಇಚ್ಛೆ ಶಾಂತಿಯದಾಗಿತ್ತು. ಇವಳ ಜೀವನದುದ್ದಕ್ಕೂ ಒಂದಲ್ಲ ಒಂದು ಸಮಸ್ಯೆಗಳು ಸವಾಲುಗಳು, ಬರುತ್ತಲೇ ಇದ್ದವು ಅವುಗಳಿಗೆ ಸೆಡ್ಡು ಹೊಡೆದು ನಿಂತು ತನ್ನ ಬದುಕನ್ನು ತಾನು ತನಗೆ ತೋಚಿದಂತೆ ರೂಪಿಸಿಕೊಳ್ಳುವ ಛಲವನ್ನು ಹೊಂದುತ್ತ ಬರುತ್ತಾಳೆ.

ಶಾಂತಿ ಶ್ರೀಕಾಂತನ ಮುಂದೆ ಶಾಲೆಯ ನೌಕರಿಯಿಂದ ತನ್ನನ್ನು ತಗೆದ ವಿಚಾರವನ್ನು ಹೇಳಿದಳು ಅದಕ್ಕೆ ಶ್ರೀಕಾಂತ, "ಆಯ್ತು ಬಿಡು... ಇದು ಹಿಂಗೇ ಆಗ್ತದಂತ ನನಗೆ ಮೊದಲೇ ಅನಿಸಿತ್ತು" ಅಂದು ಅಳಬ್ಯಾಡ ಮತ್ತ ಬ್ಯಾರೆಕಡೆ ನೌಕರಿ ನೋಡಾವೆಂತ.. ಅಂದೇನೆ.. ವಿನಃ ನೀ ನೌಕರಿ ಮಾಡೋ ಜರೂರತ್ತರೆ ಎನದ ನಮ್ಗ? ಸುಮ್ಮನ ಮನ್ಯಾಗಿದ್ದು ಬಿಡು ಹಾಯಾಗಿ ಅಂತ ಬಾಯಿಮಾತಿಗಾದರೂ ಹೇಳಲಿಲ್ಲವಲ್ಲ ಎಂದು ಶಾಂತಿಯನ್ನು ಸಂತೈಹಿಸಲಿಲ್ಲ ಪ್ರೀತಿಯಿಂದ ಮಾತಾಡಿಸಲಿಲ್ಲ ಎಂದು ಬಹಳ ದುಃಖಪಡುತ್ತಾಳೆ. ಅಲ್ಲಿಯೇ ಶಾಂತಿಗೆ ಶ್ರೀಕಾಂತನ ನಿಜ ಬಣ್ಣ ಬಯಲಾಗುತ್ತದೆ. (ಪು. ೪೫೬) ತನ್ನ ಆಯ್ಕೆಯ ತಪ್ಪಿನ ಅರಿವಾಗುತ್ತದೆ. ಇವನು ಹಗಲಿರುಳಿನ ಮಿತಿಮೀರಿದ ಕುಡಿತ, ಕಚ್ಚೆ ಹರುಕತನದಿಂದ ಶಾಂತಿ ರೋಸಿಹೋಗುತ್ತಾಳೆ, ಶ್ರೀಕಾಂತನಿಗಾಗಿ ತನ್ನ ತಂದೆತಾಯಿ ಸ್ನೇಹಿತೆಯರನ್ನು ದೂರಮಾಡಿಕೊಂಡು ಇವನನ್ನು ನಂಬಿರುತ್ತಾಳೆ. ಆದರೆ ಅದೇ ನಂಬಿಕೆ ಅವಳ ಬದುಕಿನ ದಾರಿಯಲ್ಲಿ ಮುಳ್ಳಾಗಿ ಪರಿಣಮಿಸುತ್ತದೆ. ದಿನಾ ಜಗಳ ಕಿರಿಕಿರಿ ಹೊಡಿಬಡಿ ಅಂತಾ ಶುರುವಾಯಿತು. ಅದೇ ಹಂತದಲ್ಲಿ ಅವನಿಂದ ಎರಡು ಮಕ್ಕಳ ಹುಟ್ಟಿದವು, ಶ್ರೀಕಾಂತ ಶಾಂತಿಯ ಮನೆಯ ಮತ್ತು ಮಕ್ಕಳ ಯಾವ ಜವಾಬ್ದಾರಿಯನ್ನು ತೆಗೆದುಕೊಳ್ಳುವುದಿಲ್ಲ. ಮನೆಯ ಖರ್ಚಿಗೆ ಹಣ ಕೊಡು ಎಂದು ಈ ರೀತಿಯಾಗಿ ಶಾಂತಿ ಕೇಳುತ್ತಾಳೆ. "ಮನಿ ಖರ್ಚು? ಈಸು ದಿನ ನಾನೊಬ್ಬಕ್ಕಿನೇ ಇದ್ದೆ. ನಡೀತಿತ್ತು. ಈಗ ಸಂಸಾರ ಬೆಳಿಲಿಕತ್ತಾದ... ಖರ್ಚು ವೆಚ್ಚನೂ ಜಾಸ್ತಿಯಾಗ್ಯಾದ ನೀನೂ ಪ್ರತಿ ತಿಂಗಳು ಇಂತಿಷ್ಟು ಅಂತ ಖರ್ಚಿಗಿ ರೂಪಾಯಿ ಕೊಡ್ಬೇಕು ನೋಡು" ಎಂದು ಕೇಳಿದಾಗ ಅದಕ್ಕೆ ಶ್ರೀಕಾಂತ.

"ಯಾಕ... ನಿನ್ನ ಪಗಾರ ಸಾಲಂಗಿಲ್ಲೇನು ಮನಿ ಖರ್ಚಿಗಿ ಲೆಕ್ಕಾ ತೋರ್ಸು ಸಾಲಂಗಿಲ್ಲ ಕಮ್ಮಿ ಬೀಳ್ತಾದ ಅಂದರ... ಕುಡ್ತಿನೆಂತ..." (ಪು. ೪೯೫) ಅನ್ನುತ್ತಾನೆ. ಅಂದರೆ ಶಾಂತಿ ದುಡಿಮೆಯಲ್ಲಿಯೇ ಅವಳ ಮಕ್ಕಳು ಬದುಕಬೇಕು. ಎಂದು ಶ್ರೀಕಾಂತ ಹೇಳುತ್ತಾನೆ. ಶ್ರೀಕಾಂತ ಮಾತ್ರ ಮನೆಗೆ ಯಾವುದೇ ಹಣದ ಸಹಾಯ ಮಾಡವುದಿಲ್ಲ ಎನ್ನುತ್ತಾನೆ. ಶಾಂತಿ ಎಷ್ಟೇಯಾದರೂ ಒಂಟಿ ಹೆಂಗಸು ಅವಳು ಏನು ಮಾಡಿದರು ಯಾರು ಪ್ರಶ್ನೆ ಮಾಡುವವರಿಲ್ಲ ಎಂದು ಶಾಂತಿಗೆ ನೀನು ನನ್ನ ಆಸ್ತಿಯನ್ನು ಮತ್ತು ಶ್ರೀಮಂತಿಕೆಯನ್ನು ಪ್ರೀತಿಸಿ ನನ್ನ ಮದುವೆಯಾದೇ ಎಂದು ಶಾಂತಿಗೆ ಹೇಳುತ್ತಾನೆ. ತನ್ನ ಮೊದಲ ಹೆಂಡತಿ ಮಾಯಾ ಆಕೆ ನನ್ನ ಶ್ರೀಮಂತಿಕೆ ಹಿಂದೆ ಬಿದ್ದು ಮದುವೆಯಾಗುತ್ತಾಳ ಎಂದು ಹೇಳುತ್ತಿದ್ದದ್ದು ನಿಜನೋಡು ಎಂದು ಹೇಳುತ್ತಾನೆ.

ಹಾಗೆ ನೋಡಿದರೆ ಶ್ರೀಕಾಂತನೇ ಶಾಂತಿಯ ಹಿಂದೆಬಿದ್ದು ಮದುವೆಯಾಗಿರುತ್ತಾನೆ. ಶ್ರೀಕಾಂತನ ಮೇಲೆ ಸಿಟ್ಟಿನಿಂದ ಈ ರೀತಿಯಾಗಿ ಹೇಳುತ್ತಾಳೆ. "ಪುಕ್ಕಟೆ ನನಗ

ಎಂಜಾಯ್ ಮಾಡ್ಕೋತ ಮಕ್ಕಳು ಹುಟ್ಸಿಸು... ಮುಂದೊಂದು ದಿನ ನಾನೂ ನನ್ ಮಕ್ಳೂ ರಸ್ತಾದ ಮ್ಯಾಲ ನಿಂತು "ಅಮ್ಮಾ... ತಾಯೀ ಅಂತ ಭಿಕ್ಷಾ ಬೇಡ್ಡೋ ಪಾಳಿ ತಂದಿಡ್ತಿ ನೀನೂ... ತಿಳೀತು. ಬಿಡು ನಿನ್ ಗುಣಾ..." (ಪು.೪೯೬) ಶಾಂತಿಯು ಒಬ್ಬ ವಿಚಾರವಂತೆಯಾಗಿದ್ದರೂ ಸಹ ಅವಳಿಗೆ ವ್ಯವಹಾರ ಜ್ಞಾನವಿರುವುದಿಲ್ಲ. ತನ್ನ ಸಂಬಳದಲ್ಲಿಯೇ ಶ್ರೀಕಾಂತ ದುಡ್ಡನ್ನು ಕಸಿದುಕೊಂಡು ಹೋಗುತ್ತಿದ್ದ. ಶಾಂತಿಗೆ ಹೊಡೆಯಲು ಅವನ ಕೈಗಳ ಜೊತೆ ಕಟ್ಟಿಗೆ, ಸೊಂಟದ ಬೆಲ್ಟುಗಳನ್ನು ತೆಗೆದುಕೊಂಡು ಹೊಡೆಯುತ್ತಿದ್ದ ಒಂದೊಂದಾಗಿ ಒಡವೆ ವಸ್ತ್ರ ಅವಳಲ್ಲಿ ಇದ್ದ ಬಂಗಾರ, ಹಣ, ಎಲ್ಲವೂ ದೋಚಿಕೊಂಡು ಹೋದ ಶಾಂತಿಯನ್ನು ಯಾವುದೋ ಕೇಸಿನಲ್ಲಿ ಸಿಕ್ಕಿಸಿದ, ಶ್ರೀಕಾಂತ ಮಾರ್ವಡಿಯೊಬ್ಬರ ಹತ್ತಿರ ಸಾಲಮಾಡಿ ಅದನ್ನು ಹಿಂತಿರುಗಿಸಲಾಗದೇ, ಮಾರ್ವಡಿ ಶ್ರೀಕಾಂತನ ಮೇಲೆ ಕೇಸುಹಾಕಿದ ಅದರಲ್ಲಿ ಶಾಂತಿಯನ್ನು ಜಾಮೀನು ಮಾಡಿದರು.

ಪಾಪ ಮುಗ್ಧ ಮಹಿಳೆ ಶಾಂತಿ ಆ ಮಾರ್ವಾಡಿಯ ಹೆಸರನ್ನು ಯಾವತ್ತೂ ಕೇಳಿರಲಿಲ್ಲ. ಈ ಶ್ರೀಕಾಂತನೇ ಸಂಚುಮಾಡಿ ಶಾಂತಿಯನ್ನು ಈ ಒಂದು ಕೇಸಿನಲ್ಲಿ ಎಳೆದು ತಂದಿದ್ದ ಶಾಂತಿಯ ಹೆಸರನ್ನು ಕೆಡಿಸಿ ಅವಳ ಮರ್ಯಾದೆಯನ್ನು ಮಣ್ಣುಪಾಲು ಮಾಡಿದ್ದನು. ಯಾರದೋ ಸೇಡಿನ ಕೃತ್ಯಕ್ಕೆ ಪಾಪ ಅಮಾಯಕ ಶಾಂತಿ ಬಲಿಯಾಗುತ್ತಾಳೆ. ಮತ್ತೇ ಮನೆಖರ್ಚು ಕೋರ್ಟು ಜಾಮೀನು ಕೇಸುಗಳ ಕಿರಿಕಿರಿಯೊಂದಿಗೆ ಶಾಂತಿ ಅಪಮಾನವನ್ನು ಅನುಭವಿಸಿ ನೆಲ ಕಚ್ಚಿದಳು. ಇದರಲ್ಲಿಯೇ ಶಾಂತಿಗೆ ಮತ್ತೊಂದು ವಿಘ್ನ ಎದುರಾಯಿತು. ಕ್ರಿಮಿನಲ್ ಮೊಕದ್ದಮೆಯಿರುವ ಸರ್ಕಾರಿ ನೌಕರನನ್ನು ಆ ಕೇಸು ಮುಗಿಯುವವರೆಗೂ ಕೆಲಸದಿಂದ ಅಮಾನತ್ತಿನಲ್ಲಿಡಬೇಕೆಂಬ ಆದೇಶದ ಮೇರೆಗೆ ಹೆಡ್ಡಾಆಫೀಸಿನಿಂದ ಆದೇಶ ಬಂದಿತ್ತು. ಕಾಲೇಜಿನ ಆಡಳಿತ ಮಂಡಳಿ, ಕೆಲಸದಿಂದ ಸಸ್ಪೆಂಡ್ ಮಾಡಿದ್ದರು. ಶಾಂತಿಗೆ ಆಸರೆಯಾಗಿದ್ದ ಕೆಲಸವು ಇಲ್ಲವಾಯಿತು. ಅವಳಿಗೆ ಅರ್ಧ ಸಂಬಳ ಬರುತ್ತಿದ್ದರೂ ಅದು ಸರಿಯಾದ ಸಮಯಕ್ಕೆ ಬರುತ್ತಿರಲಿಲ್ಲ ಈ ಮನುಷ್ಯ ಸಮಾಜದಲ್ಲಿ ಮನುಷ್ಯತ್ವವನ್ನು ಮರೆತು ಬಾಳುವವರ ಸಂಖ್ಯೆ ಹೆಚ್ಚಾಗಿದೆ. ಶಾಂತಿ ಕಷ್ಟದಲ್ಲಿರುವಾಗ ಅವಳಿಗೆ ಯಾರು ಸಹಾಯ ಮಾಡುವುದಿಲ್ಲ. ತಾಳಿಕಟ್ಟಿದ ಗಂಡನಾದ ಶ್ರೀಕಾಂತ ಸಹ ಅವಳಿಗೆ ಹಣದ ಸಹಾಯ ಮಾಡುವುದಿಲ್ಲ. ಶಾಂತಿಯ ಮೇಲಿದ್ದ ಕೇಸು ಮುಕ್ತಾಯಗೊಂಡಿತ್ತು. ಇವಳು ನಿರಪರಾಧಿ ಎಂದು ಸಾಭೀತಾಯಿತು ಇವಳು ಮತ್ತೆ ಕಾಲೇಜು ಪ್ರಿನ್ಸಿಪಾಲರಾಗಿ ಮುಂದುವರೆಯುತ್ತಾಳೆ.

ಶಾಂತಿಗೆ ಹೋದಜೀವ ಮರಳಿ ಬಂದಂತಾಗುತ್ತದೆ. ಏಕೆಂದರೆ ಶಾಂತಿಗೆ ತನ್ನ ಮಕ್ಕಳನ್ನು ಸಾಕಿ ಬೆಳೆಸಲು ಅವಳ ಕೆಲಸವೊಂದೆ, ಆಧಾರವಾಗಿರುತ್ತದೆ. ಅವಳ

ಮುಂದಿನ ಜೀವನಕ್ಕೆ ಕೆಲಸ ಮಾಡುವುದು ಅನಿವಾರ್ಯವಾಗಿರುತ್ತದೆ. ಶಾಂತಿಯಿಂದ ಶ್ರೀಕಾಂತ ದೂರವಾಗತೊಡಗಿದ ಶಾಂತಿಗೂ ಅದೇ ಬೇಕಿತ್ತು. ಶ್ರೀಕಾಂತನನ್ನು ಬಿಟ್ಟರೆ ಸಾಕು ಈ ಕಿರಿಕಿರಿ ನೋವು, ಹಿಂಸೆಗಳಿಂದ ಬಿಡುಗಡೆಗೆ ಕಾತರಿಸುತ್ತಿದ್ದಳು. ಶಾಂತಿ ಶ್ರೀಕಾಂತನಿಂದ ದೂರವಿರಬೇಕು ಎಂದು ಮೊದಲಿನ ಮನೆಯನ್ನು ಬಿಟ್ಟು ಬೇರೆಡೆಗೆ ಬಂದಿದ್ದಳು ಅಲ್ಲಿಯ ಸುತ್ತಮುತ್ತಲಿನಲ್ಲಿ ಬಡವರು ನಿರ್ಗತಿಕರು ಮೊದಲಾದವರು ಗುಡಿಸಲು ಜನರದ್ದೇ ಬದುಕು ಬಿಚ್ಚಿಕೊಂಡಿರುತ್ತದೆ. ಶಾಂತಿಯೊಳಗೆ ಅಡಗಿದ ಯಾರ ಮೇಲಿನ ದ್ವೇಶವೋ ಸಿಟ್ಟೋ ಸಿಡುಕೋ ಬಂಡಾಯಗಳೂ ಹೊರಗೆ ಉಕ್ಕಿ ಉಮ್ಮಳಿಸಿ ಬರಲು ಚಡಪಡಿಸಿದವು ಇಷ್ಟೊಂದು ವರ್ಷಗಳ ದೀರ್ಘ ಕಾಲದ ಅಂದರೆ ಎಪ್ಪತ್ತರ ದಶಕದಲ್ಲಿ ಮತ್ತೆ ಬರೆಯಲು ಲೇಖನಿ ಹಿಡಿದಳು.

ಶಾಂತಿಯವರು ಹಿಂದಿನಂತೆ ಜನಪ್ರಿಯ ಕಾದಂಬರಿಗಳನ್ನು ಬರೆಯದೆ ಕೊಳಗೇರಿ ಝೋಪಡಿ ಪಟ್ಟಿಯ ಅನಕ್ಷರಸ್ಥ, ಅಮಾಯಕ ಹೆಂಗಸರ ಲೈಂಗಿಕ ಶೋಷಣೆಯ ಬಗ್ಗೆ ಕ್ರೌರ್ಯ ಹಿಂಸೆಗಳ ಬಗ್ಗೆ, ಗಂಡಿನ ಪರವಾದ ವ್ಯವಸ್ಥೆ ಹುಟ್ಟುಹಾಕಿದ್ದ ರೀತಿ ರಿವಾಜುಗಳ ಬಗ್ಗೆ ಸಂಪ್ರದಾಯ ಪದ್ಧತಿಗಳ ಬಗ್ಗೆ ಬಂಡಾಯದ ದ್ವನಿಯೆತ್ತಿದಳು. ಬರಹದ ಮೂಲಕ ಕೆಳವರ್ಗದ ನೂರೆಂಟು ಸಮಸ್ಯೆಗಳನ್ನು ಜನರ ಬದುಕಿನ ಅಸಹಾಯಕತೆಯ ಬಗ್ಗೆ "ಕಪ್ಪು ಮಂದಿಯ ಬಾಳಿನ ಧಾರುಣತೆಯ ಬಗ್ಗೆ ಹೊಲೆಮಾದಿಗ ಜೀವನದ ನಿರ್ಗತಿಕರ ಬಗ್ಗೆ ಆ ಜನರ ದಿನನಿತ್ಯದ ಕಾಮ ಕುಡಿತಗಳ ಬಗ್ಗೆ ಖುಲ್ಲಮ್ ಖುಲ್ಲಾಗಿ ತನ್ನ ಬರಹದಲ್ಲಿ ಕತೆಗಳಲ್ಲಿ ದಾಖಲಿಸತೊಡಗಿದಳು.

ಶಾಂತಿಯ ಎದೆಯಲ್ಲಿ ಅಡಗಿ ಕುಳಿತಿದ್ದ ಆ ಕೋಪ ತಾಪ, ಸಿಟ್ಟು, ಸೆಡವು ರೋಷವೇಶಗಳು ನೆಲದಿಂದ ಉಕ್ಕುವ ಲಾವರಸದಂತೆ ಮೇಲಕ್ಕೆ ಬಂದು ಅವಳ ಕಾದಂಬರಿಗಳಲ್ಲಿ ರಭಸದಿಂದ ಭೋರ್ಗರೆದು ಹೃದಯವನ್ನು ಸೇರಿ ಜಾಗೃತಿಯನ್ನು ಮೂಡಿಸಿದ್ದವು ಶಾಂತಿಯವರು ಬೆಳೆದು ಬಂದಿದ್ದ ಸಮಾಜದ ಕ್ರೌರ್ಯವ್ಯವಸ್ಥೆಯ ವಿರುದ್ಧ ಬಂಡೆದ್ದು ಹೆಣ್ಣಿನ ಸೇಡಿನ ಪ್ರತೀಕವಾಗಿ ರೊಚ್ಚಿನಿಂದಲೇ ತಮ್ಮ ಬರವಣಿಗೆಯನ್ನು ಮುಂದುವರೆಸುತ್ತಾರೆ. ಎಂಬತ್ತರ ದಶಕದಿಂದೀಚೆಗೆ ಶಾಂತಿ ಬಂಡಾಯ ಮನೋಧರ್ಮದ ಬರವಣಿಗೆ ಕೈಗೊಂಡು ಯಾರ ಹಂಗೂ ಇಲ್ಲದೆ ಶೋಷಣೆಯ ವಿರುದ್ಧ ದಂಗೆಯ ವಿರುದ್ಧ ಬರವಣಿಗೆಯನ್ನು ಪ್ರಾರಂಭಿಸಿ ಯಾರ ನಿರ್ಭಯಗೊಳಗಾಗದೆ. ವಿಭಿನ್ನವಾದ ಸಾಹಿತ್ಯ ಸೃಷ್ಟಿಸಿದರು. ಹಳ್ಳಿ ಹಾಗೂ ಪಟ್ಟಣಗಳ ಕೆಳಗೇರಿಯ ಹೆಂಗಸರ ದಾರುಣ ಸ್ಥಿತಿಗಳ ಬಗ್ಗೆ ಬರೆಯುವಾಗ ಅವರ ನೋವಿಗೆ ಸ್ಪಂದಿಸಿ ಅಕ್ಷರಗಳ ಮೂಲಕ ಸಾಂತ್ವನ ಹೇಳುತ್ತಾರೆ. ಅವರ ಆಂತರ್ಯದ ವೇದನೆಗೆ ನಾಲಿಗೆಯಾಗುತ್ತಾರೆ. ಗಟ್ಟಿ ಧ್ವನಿಯಾಗುತ್ತಾರೆ. ಇಂಥವರ ಬದುಕನ್ನು ಪ್ರತ್ಯಕ್ಷವಾಗಿ ಭೇಟಮಾಡಿ ಕಂಡು ಅವರ

ಅನುಭವಗಳಿಗೆ ಸ್ಪಂದಿಸಿ ಅವರ ಯಾತನೆಯ ಬದುಕನ್ನು ಕತೆ ಕಾದಂಬರಿಗಳಲ್ಲಿ ವ್ಯಕ್ತಗೊಳಿಸಿ ಜಾಗೃತಿ ಮೂಡಿಸುತ್ತಾರೆ.

ಶಾಂತಿ ತನ್ನ ಕಾದಂಬರಿಗಳಲ್ಲಿ ಕಲುಬುರ್ಗಿಯ ಆಡು ಭಾಷೆಯಲ್ಲಿಯೇ ಬರೆಯ ತೊಡಗಿದಳು. ಬಡವರು ಅನುಭವಿಸುತ್ತಿರುವ ಬದುಕಿನ ಹಲವು ಹದಿನೆಂಟು ಮುಖವಾಡಗಳನ್ನು ಕಿತ್ತೆಸೆದು ಅವುಗಳ ಹಿಂದಿರುವ ಮೆಕಪ್ಪಿಲ್ಲದ ಮಾರಿಗಳಿಗೆ ಭೂತ ಕನ್ನಡಿ ಹಿಡಿಯುವ ಸಾಚಾ ಕಳಕಳಿಯ ಪ್ರಾಮಾಣಿಕ ಪ್ರಯತ್ನವನ್ನು ಶಾಂತಿಯವರು ಮಾಡಿದ್ದಾರೆ.

ಶಾಂತಿ ತನ್ನ ಕಾದಂಬರಿಗಳಲ್ಲಿ ಅಸಲಿ ಸೇಂದಿ ನಾಟಿಕೋಳಿ, ಹುಲ್ಲಿನ ಗುಡಿಸಲುಗಳು ಬಿಳಿ ಜೋಳದ ರೊಟ್ಟಿ, ಪುಂಡಿಪಲ್ಲೆ, ಎಣ್ಣೆ ಬದನೆಕಾಯಿ, ಪಲ್ಯ, ಶೇಂಗಾದ ಹೋಳಿಗೆಗಳ ವರ್ಣನೆ ಮಾಡಿದ್ದಾರೆ. ಹಳ್ಳಿಯಿಂದ ಬಂದ ಶಾಂತಿ ಬಾಲ್ಯದಿಂದಲೂ ಬಡತನವನ್ನು ನೋಡಿ ಅನುಭವಿಸಿ ಬಂದರು. ಅವಳಿಗೆ ಶ್ರೀಮಂತರ ಭವ್ಯ ಬಂಗಲೆ ಬಣ್ಣದ ಕಾರುಗಳು ಇಷ್ಟವಾಗದೇ ಹಳ್ಳಿಯ ಅರೆಚಪ್ಪರದ ಮನೆ, ಸೇಂದಿ ಪೊರಕೆಯ ಚಪ್ಪರಗಳೇ ತುಂಬ ಪ್ರಿಯವಾಗುತ್ತವೆ. ಇವುಗಳನ್ನು ತನ್ನ ಕತೆ ಕಾದಂಬರಿಗಳ ವಸ್ತುಗಳಾಗಿಟ್ಟುಕೊಂಡು ಬರೆಯತೊಡಗಿದಳು. ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಕಿಡಿಕಾರುವ ಶಾಂತಿಯ ಬರಹಗಳು ಒಂದೊಂದಾಗಿ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಹಳ್ಳಿಯಲ್ಲಿಯ ಗೌಡ ಕುಲಕರ್ಣಿ ಶೆಟ್ಟಿ, ಸಾಹುಕಾರರಂಥ ಮೊದಲಾದ ಶ್ರೀಮಂತ ಮಂದಿಯ ಕಚ್ಚೆಹರಕತನವನ್ನು ಬಯಲಿಗೆಳೆದಳು. ಹಳ್ಳಿಯ ಕೆಳಸ್ಥರದ ಅಮಾಯಕ ಮಹಿಳೆಯರ ಮೇಲಿನ ಶೋಷಣೆಯನ್ನು ಡಂಗೂರ ಸಾರಿದರು. ದಲಿತರ ಮೇಲೆ, ಅಸ್ಪೃಶ್ಯರ ಮೇಲೆ ನಿರ್ಗತಿಕರ ಮೇಲೆ ನಡೆಸುವ ದೌರ್ಜನ್ಯ ದಬ್ಬಾಳಿಕೆ ಕ್ರೌರ್ಯಗಳನ್ನು ನಿಷ್ಠುರವಾಗಿ ಬರೆದಳು. ಬಹಳ ಮುಖ್ಯವಾಗಿ ಶಾಂತಿಯವರು ಹೆಣ್ಣು ದೇವತೆಯ ಹೆಸರಿನ ಮೇಲೆ ದಲಿತ ಹೆಣ್ಣುಮಕ್ಕಳ ಬಟ್ಟೆಯನ್ನು ಬಿಚ್ಚಿಸಿ ಬೆತ್ತಲೆ ಮಾಡಿ ಚುಂಚೂರು ಜಾತ್ರೆಯಲ್ಲಿ ತಲೆಯ ಮೇಲೆ ಸೂಡಾರತಿಯನ್ನು ಹೊರಸಿ ಅವಳ ಮೆರವಣಿಗೆ ಮಾಡಿ ಮೋಜು ಮಾಡುವ ರೀತಿ ರಿವಾಜುಗಳನ್ನು ದೇವಿಯ ಹೆಸರಿನ ಮೇಲೆ ಅದೇ ತಾನೆ ಮೈನೆರೆದ ಹದಿಹರೆಯದ ಹಸಿಮೈಯ ಹೆಣ್ಣುಮಕ್ಕಳನ್ನು ಸೂಳೆಯಾಗಿಸಿ (ವೇಶ್ಯೆ) ಸೂಳೆಗಾರಿಕೆಯಾಗಿಸುವ ಹುನ್ನಾರುಗಳನ್ನು ಜೋಗಣಿ, ಜೋಗವ್ವ, ಜೋಗತಿಯೆಂದು ಕರೆದು ಅವರ ಮಾನಮರ್ಯಾದೆಯನ್ನು ಬಜಾರಿನಲ್ಲಿ ಹರಾಜು ಹಾಕುವ ಹಲ್ಕಟ್‌ಗಿರಿಯನ್ನು ಸಾರಾಸಗಟಾಗಿ ಬಯಲಿಗಿಟ್ಟು ಬರೆಯುತ್ತಾರೆ.

ಶಾಂತಿ ಜೋಗಣಿ ಬಿಡುವ ಪದ್ಧತಿಯನ್ನು ಬಹಳ ಮಾರ್ಮಿಕವಾಗಿ ಪ್ರಶ್ನೆ ಮಾಡಿ ಬರೆದಿದ್ದರಿಂದ "ಯಾವ ಹೆಣ್ಣು ದೇವತೆ ತಾನೆ ಹೆಣ್ಣಿನ ಬೆತ್ತಲೆ ಮೆರೆವಣಿಗೆಯ

ಹರಕೆ ಬೇಡುತ್ತದೆ? ತಾನೂ ಹೆಣ್ಣು ದೇವತೆಯಾಗಿ ಇನ್ನೊಂದು ಹೆಣ್ಣನ್ನು ಗಂಡನ ಹೆಂಡತಿಯಾಗಿ ಬಾಳಲು ಬಿಡದೆ ಊರ ಗಂಡಸರ ಸೂಳೆಯಾಗುವ ಸೇವೆಯನ್ನು ಬಯಸುತ್ತದೆ? ಇಂತಹ ಹರಕೆಗಳು ರೀತಿ–ರಿವಾಜುಗಳು ಇರುವುದು ಕೇವಲ ಕೆಳವರ್ಗದ ಹೆಣ್ಣುಮಕ್ಕಳಿಗೆ ಮಾತ್ರ ಎನ್ನುವುದು ಕಟುಸತ್ಯವಾದ ಸಂಗತಿಯನ್ನು ತೆರೆದಿಡುತ್ತಾರೆ. ಶಾಂತಿಯ ಬರಹಗಳು ಓದುಗರಲ್ಲಿ ತಾಜಾತನದ ಸಂಚಲನ ಮೂಡಿಸುತ್ತಿದ್ದವು ಶಾಂತಿ ಸುಮಾಶ್ರೀಕಾಂತ ಎನ್ನುವ ಹೆಸರಿನಲ್ಲಿ ಕಾದಂಬರಿಯನ್ನು ಬರೆಯತೊಡಗಿದಳು. ಮಾಪುರ ತಾಯಿಮಕ್ಕಳು, ಆಸರೆಗಳು, ಚಿಕ್ಕಿಯಹರೆಯದ ದಿನಗಳು, ದಂಗೆ, ಅಭಿಮಾನ, ದುಮ್ಮಸ್ಸು ಬದಲಾಗುವ ಬಣ್ಣಗಳು, ಮೋಹ ಮೊದಲಾದ ಕಾದಂಬರಿಗಳು ಸಾಲುಸಾಲಾಗಿ ಮುದ್ರಣಗೊಂಡು ಮಾರುಕಟ್ಟೆಗೆ ಬಂದು ಅಂಗಡಿಗಳಲ್ಲಿ ಜನರು ಮುಗಿ ಬಿದ್ದು ಖರೀದಿಸಿ ಓದುವಂತೆ ಮಾಡಿದ್ದವು.

ಕೆಲವೊಬ್ಬರು ಶಾಂತಿಗೆ "ಛೇ... ಒಬ್ಬ ಹೆಣ್ಣುಮಗಳಾಗಿ ಕಾಮದ ಬಗ್ಗೆ ಲೈಂಗಿಕತೆಯ ಬಗ್ಗೆ ಹ್ಯಾಗ್ ಮುಲಾಜಿಲ್ಲದೆ ಬರೀತಾಳಲ್ಲ ಕೋಡಿ... ಅಸಹ್ಯ..." (ಪು. ೫೪೭) ಶಾಂತಿಯ ಕಾದಂಬರಿಯನ್ನು ಓದಿದ ಕೆಲವು ಮಂದಿ ಅಸಹ್ಯ ಎಂದುಕೊಳ್ಳುತ್ತಿದ್ದರು. ಈ ಶಾಂತಿಗೆ ಗಂಡನ ಭಯವಿಲ್ಲವೇನು ಇವಳ ಅದಕ್ಕಾಗಿಯೇ ಈ ರೀತಿಯಲ್ಲಿ ಬರೆಯುತ್ತಾಳೆ ಎಂದು ಅವಳ ಬಗ್ಗೆ ತಪ್ಪು ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಮೇಲ್ ಮಾತಿಗೆ ಅವಳನ್ನು ಬೈದರು ಒಳಗೊಳಗೇ ಕದ್ದುಮುಚ್ಚಿ ಓದಿ ತೊಡೆ ತೂರಿಸಿಕೊಂಡದ್ದಂತೂ ಸುಳ್ಳಲ್ಲ ಶಾಂತಿ ಯಾವುದೇ ಹೊಗಳಿಕೆ ತೆಗಳಿಕೆಗಳೆರಡನ್ನು ಸಮಾನವಾಗಿ ತೆಗೆದುಕೊಂಡು ಯಾವ ಮುಲಾಜೂ ಇಲ್ಲದೆ, ಯಾರಿಗೂ ಅಂಜದೆ ತನ್ನಷ್ಟಕ್ಕೆ ತಾನು ಎದೆ ತುಂಬಿ ಹಾಡುತ್ತ ಹಾರುವ ಹಕ್ಕಿಯಂತೆ ಶಾಂತಿ ತನಗನಿಸಿದ್ದನ್ನು ತಾನು ಕಂಡಿದ್ದನ್ನು ತಾನು ಅನುಭವಿಸಿದ್ದನ್ನು ಇದ್ದಕ್ಕಿದ್ದಂತೆಯೇ ಹಸಿಹಸಿಯಾಗಿ ತನ್ನ ಕಾದಂಬರಿಗಳಲ್ಲಿ ದಾಖಲಿಸತೊಡಗಿದಳು.

ಶಾಂತಿಯ ಬರಹಗಳಿಂದ ಅವಳಿಗೆ ಬೇರೆಯದೇ ರೀತಿಯ ಸಮಸ್ಯೆಗಳು ಎದುರಾದವು. "ಲಂಕೇಶ್ ದಿನಪತ್ರಿಕೆಯಲ್ಲಿ ತರಕಾರಿ ಮಾರುವ ಹೆಂಗಸರಿಗೆ ದಿನನಿತ್ಯ ಕಿರುಕುಳ ಕೊಡುವ ಒಬ್ಬ ಗೊಂಡಾನ ಬಗ್ಗೆ ಬರೆಯುತ್ತಾಳೆ. ಅದು ಪ್ರಕಟವಾದ ಮರುದಿನವೇ ಪೋಲೀಸರು ಅವಳ ಮನೆಯ ಬಾಗಿಲಿಗೆ ಬಂದು "ಯಾರ್ರಿ ಆಗೊಂಡಾ? ಎಲ್ಲಿದಾನ್ರೀ ಎಂದು ಶಾಂತಿಗೆ ದಮ್ಮಕಿ ಹಾಕಿದನು, "ಸುಳ್ಳು ಸುಳ್ಳೇ ಏನೇನರೆ ಬರ್‍ದು ನಮ್ಮ ಡಿಪಾರ್ಟ್‌ಮೆಂಟಿಗೆ ಕೆಟ್ಟಹೆಸರು ತರತಿರೇನ್ರೀ ಎಂದು ಹೇಳುತಾವ್ತ ಅವಳಿಗೆ ಹೆದರಿಕೆಯನ್ನು ಹಾಕುತ್ತಾರೆ. ತರಕಾರಿ ಮಾರುವ ಮಹಿಳೆಗೆ ನಿಜವಾಗಿಯೂ ತೊಂದರೆಯಾಗುತ್ತಿದ್ದರೆ ಆ ಮಹಿಳೆ ಪೋಲಿಸ್ ಠಾಣೆಗೆ ಬಂದು ದೂರುಕೊಡುತ್ತಿದ್ದರು."

(ಪು. ೫೬೧) ಎಂದು ದಬಾಯಿಸುತ್ತಾರೆ ಅದಕ್ಕೆ ಶಾಂತಿಯವರು ಮಹಿಳೆಯ ಅಸಹಾಯಕತೆಯನ್ನು ಈ ರೀತಿಯಾಗಿ ಹೇಳಿದ್ದಾರೆ.

"ದುಡಿದುಣ್ಣುವ ಬಡ ಹೆಂಗಸರಿಗೆ ಅಂಥ ಧೈರ್ಯವಾದರೂ ಎಲ್ಲಿಂದ ಬರಬೇಕು ಎನ್ನುತ್ತಾರೆ." (ಪು. ೫೬೧) ಮಹಿಳೆಯ ಎಂಥ ನೋವು ಸಂಕಟಗಳನ್ನಾದರೂ ತಮ್ಮ ಎದೆಯಲ್ಲಿ ಮುಚ್ಚಿಕೊಳ್ಳುತ್ತಾರೆ. ವಿನಃ ಅದರ ವಿರುದ್ಧ ತಿರುಗಿ ಬೀಳುವುದಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಕಾಲ ಬದಲಾಗಿದೆ. ಮಹಿಳೆಯರ ಹಲವಾರು ಸಂಘಟನೆಗಳನ್ನು ಕಟ್ಟಿಕೊಂಡು ತಮ್ಮ ಹಿತರಕ್ಷಣೆಯನ್ನು ಕಾಯ್ದುಕೊಳ್ಳಲು ನೆರವಾಗುತ್ತ ಕಾರ್ಯನಿರ್ವಹಿಸುತ್ತವೆ. ಅಂದರೆ ಹಿಂದಿನ ಕಾಲದ ಮಹಿಳೆಯರಿಗೆ ಹಾಗೆ ಆಧುನಿಕ ಕಾಲದ ಮಹಿಳೆಯರು ಕೂಡ ದೌರ್ಜನ್ಯಕ್ಕೆ ಶೋಷಣೆಗಳಿಗೆ ಬಲಿಯಾಗುತ್ತಿದ್ದಾರೆ. ಅಂದರೆ ಅದರ ರೂಪಗಳು ಬದಲಾಗಿವೆ. ಶಾಂತಿಗೆ ಆ ಗೂಂಡಾ ನಮ್ಮ ಮನೆಗೆ ಬಂದು ಗಲಾಟೆ ಮಾಡುತ್ತಿದ್ದನು ಇದು ಮೊದಲೇ ಗಂಡುದಿಕ್ಕು ಇಲ್ಲದ ಮನೆ ಮಕ್ಕಳು ಇನ್ನೂ ಚಿಕ್ಕವರು ಎಂದು ರಾತ್ರಿಯಾದರೇ ಸಾಕು ಹೆದರಿಕೆಯಾಗತೊಡಗುತ್ತಿತ್ತು.

"ಸಂಗಾತಿ" ಶೀರ್ಷಿಕೆಯ ಕತೆ ಸುಧಾದಲ್ಲಿ ಪ್ರಕಟವಾಗಿತ್ತು. ಊರ ರಂಡಮುಂಡೆಯಾಗಿದ್ದ ಗೌಡ್ತಿಯೊಬ್ಬಳು ತನ್ನ ನಂಬುಗೆಯ ಆಳು ಮಗನನ್ನು ಪ್ರೀತಿಸಿ ಮದುವೆಯಾದ ಕತೆಯದು." (ಪು. ೫೬೨)

ಶಾಂತಿ ಬರೆದ ಕತೆಗೆ ಕಾಕತಾಳೀಯವೆಂಬಂತೆ ಆ ಊರ ಗೌಡ್ತಿಯೇ ಹಾಗೇ ಇದ್ದಳು ಆ ಊರಿನ ನಾಕೆಂಟು ಮಂದಿ ಗಂಡಸರು ಬಂದು ಶಾಂತಿಗೆ "ನಮ್ಮೂರ ಗೌಡ್ತಿಮ್ಯಾಲ ಕತ್ತಿ ಬರ್ದು ಆಕಿಗಿ ಬದಲಾಮಿ ಮಾಡ್ತಿರೇನು? ಆಕಿನ ಬಗ್ಗೆ ಬರೀಲಕ್ಕ ನಿಮಗೇನು ಹಕ್ಕದಾ?" ಎಂದು ಒದ್ರಾಡಿ ಶಾಂತಿಗೆ ಬೆದರಿಕೆ ಹಾಕಿ ಹೋಗುತ್ತಾರೆ. ಹಾಗೆಯೇ ಕುದುರೆ ಮೇಲೆಯ ಪ್ರಕರಣದ ಬೆತ್ತಲೆ ಮೆರವಣಿಗೆ ಬಗ್ಗೆ ದೌರ್ಜನ್ಯಕ್ಕೊಳಗಾಗಿದ್ದ ಮಹಿಳೆಯರಿಬ್ಬರ ಸಂದರ್ಶನ ಮಾಡಿ ಪ್ರಕಟಿಸಿದಾಗ, ಮತ್ತು ಮಾಪುರತಾಯಿ ಮಕ್ಕಳು ಕಾದಂಬರಿ ಪ್ರಕಟವಾದಾಗಲೂ ಅವಳಿಗೆ ಬೆದರಿಕೆಯ ಅನಾಮಧೇಯ ಪತ್ರಗಳು ಅವಳನ್ನು ಕೊಂದೇ ಬಿಡುತ್ತೇವೆಂಬ ಫೋನ್ ಕರೆಗಳಿಂದಾಗಿ ಶಾಂತಿಯು ತಲ್ಲಣಗೊಳ್ಳುತ್ತಿದ್ದಳು. ಇದಾವುದಕ್ಕೆ ಬಗ್ಗದೇ ಜಗ್ಗದೆ ತನ್ನ ಹಠವನ್ನು ಸಾಧಿಸುತ್ತ ಕಲ್ಲು–ಮುಳ್ಳು, ಏಳು–ಬೀಳುಗಳಲ್ಲಿ ತನ್ನ ಜೀವನವನ್ನು ಸಾಗಿಸುತ್ತಾ ತನ್ನ ಗುರಿಯನ್ನು ಮುಟ್ಟುವಲ್ಲಿ ಯಶಸ್ವಿಯಾಗುತ್ತಾಳೆ.

ಶಾಂತಿಗೆ "ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕನ್ನಡಸಾಹಿತ್ಯ ಪರಿಷತ್ತಿನ 'ಮಲ್ಲಿಕಾ' ಪ್ರಶಸ್ತಿ, ಬಿ.ಸರೋಜಾದೇವಿ

ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯದ 'ನಾಡೋಜ' ಪ್ರಶಸ್ತಿ, ಕಲಬುರ್ಗಿ ವಿಶ್ವವಿದ್ಯಾಲಯದ 'ಗೌರವ ಡಾಕ್ಟರೇಟ್' ಅಲ್ಲದೇ ಅನೇಕ ಸಂಘ ಸಂಸ್ಥೆ, ಪ್ರತಿಷ್ಠಾನಗಳ ಪ್ರಶಸ್ತಿ ಪುರಸ್ಕಾರಗಳು ದೊರಕಿವೆ. ಶಾಂತಿ ಅಂದರೆ ಸುಮಾಶ್ರೀಕಾಂತರವರ ಇತ್ತೀಚಿನ 'ಬದುಕು' ಕಾದಂಬರಿಗೆ ಕೇಂದ್ರಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ. ಈ ಪ್ರಶಸ್ತಿಯನ್ನು ಪಡೆದ ಪ್ರಥಮ ಮಹಿಳಾಸಾಹಿತಿ ಎಂಬ ಹೆಗ್ಗಳಿಕೆಯನ್ನು ಹೊಂದಿದ್ದಾರೆ. (ಪು ೫೬೧) ಶಾಂತಿ ತನ್ನ ಮಕ್ಕಳನ್ನು ಓದಿಸಿ ವಿದ್ಯಾವಂತರನ್ನಾಗಿ ಮಾಡಿದಳು. "ಗುಬ್ಬಿಯ ಮರಿಗಳು ಹಾರಲು ಬರುವವರೆಗೂ ಮಾತ್ರ ತನ್ನ ತಾಯಿಯ ಮಡಿಲಲ್ಲಿ ಇರುತ್ತವೆ, ಅದೇ ರೀತಿಯಾಗಿ ಶಾಂತಿಯ ಮಕ್ಕಳು ಹಾಗೆಯೇ ಮಾಡುತ್ತಾರೆ. ತಮ್ಮ ಕಾಲ ಮೇಲೆ ತಾವು ನಿಲ್ಲುವವರೆಗೂ ಮಾತ್ರ ತಾಯಿಯ ಬಳಿ, ಇದಾದ ನಂತರ ಅವಳನ್ನು ಒಂಟಿ ಮಾಡಿ ದೂರದ ಊರುಗಳಿಗೆ ಕೆಲಸಕ್ಕೆಂದು ಹೋಗಿ ಅಲ್ಲಿಯೇ ನೆಲೆಸುತ್ತಾರೆ. ಮುಪ್ಪಿನ ಕಾಲದಲ್ಲಿಯೂ ಸಹ ಅವಳ ಜೊತೆಯಾಗಿ ಯಾರು ಇರುವುದಿಲ್ಲ. ಶಾಂತಿಯ ಮಗಳು ಮಧು ಗದುಗಿನಲ್ಲಿ ಕಾಲೇಜಿನ ಉಪನ್ಯಾಸಕಿಯಾಗಿ ಕೆಲಸಕ್ಕೆ ಸೇರಿದರೆ, ಮನಮೋಹನ್ ಹುಬ್ಬಳ್ಳಿಯ ಯಾವುದೋ ಹೋಟಲ್ ಮ್ಯಾನೇಜರ್ ಆಗಿ ಕೆಲಸಕ್ಕೆ ಸೇರುತ್ತಾನೆ. ಶಾಂತಿ ತನ್ನ ಮಗಳು ಮಧು ಬೇರೆ ಕಡೆಗೆ ಕೆಲಸಕ್ಕೆ ಹೋಗುತ್ತೇನೆ ಎಂದು ಹೇಳಿದಾಗ,

"ನನಗ ಯಾರಿಗಿ ಒಪ್ಪಿಸಿ ಹೋಗ್ತಿ ಮಗಳೇ! ಈ ಮುಪ್ಪಿನಲ್ಲಿ ನನ್ನನ್ಯಾರು ನೋಡಿಕೊಳ್ತಾರಿಲ್ಲಿ?" ಅಂತ ಕೇಳಬೇಕೆನಿಸಿತು ಶಾಂತಿಗೆ, ಆದರೆ ಮಗಳ ಮುಂದೆ ಅವಳಿಗೇ ಮಾತೇ ಹೊರಡಲಿಲ್ಲ. ತುಟಿ ಕಚ್ಚಿ ಕಣ್ಣೀರು ತಡೆದಳು.(ಪು.೫೭೦) ಮುಪ್ಪಿನ ಕಾಲದಲ್ಲಿ ತಂದೆ ತಾಯಿಯನ್ನು ನೋಡಿಕೊಳ್ಳುವುದು ಮಕ್ಕಳಾದವರ ಕರ್ತವ್ಯ ಮತ್ತು ಮಾನವೀಯತೆಯಾಗಿರುತ್ತದೆ. ನಮ್ಮ ಸಮಾಜದಲ್ಲಿ ಜನರು ವಿಚಾರವಂತರು, ವಿದ್ಯಾವಂತರು ಆಂದಗೆಲ್ಲಾ ತಮ್ಮ ಜವಾಬ್ದಾರಿಗಳನ್ನು ಮರೆಯುತ್ತಿದ್ದಾರೆ. ಅವರವರ ಸ್ವಾರ್ಥಕ್ಕಾಗಿ ತಂದೆ-ತಾಯಿಗಳನ್ನು ವೃದ್ಧಾಶ್ರಮಗಳಲ್ಲಿ ಬಿಟ್ಟು ಅವರಿಗೆ ತುಂಬಾ ನೋವಾಗುವ ಹಾಗೆ ನಡೆದುಕೊಳ್ಳುತ್ತಾರೆ. ತಾಯಿಯಾದವಳು ತನ್ನ ಮಕ್ಕಳನ್ನು ಒಂಭತ್ತು ತಿಂಗಳು ತನ್ನ ಗರ್ಭದಲ್ಲಿ ಇರಿಸಿಕೊಂಡು ಸಾಕಿ ಸಲಹುತ್ತಾಳೆ, ಅವರಿಗೆ ವಿದ್ಯೆ, ಬುದ್ಧಿಯನ್ನು ಕಲಿಸಿ ಸಮಾಜಕ್ಕೆ ಒಳ್ಳೆಯ ಪ್ರಜೆಯನ್ನಾಗಿ ಮಾಡುವ ಎಲ್ಲಾ ಪ್ರಯತ್ನಗಳನ್ನು ಮಾಡುತ್ತಾಳೆ. ಆದರೆ ಬೆಳೆದು ದೊಡ್ಡವರಾದ ಮಕ್ಕಳಿಗೆ ಇದರ ಯಾವುದೇ ಪರಿವಿರುವುದಿಲ್ಲ, ಈ ಅಕ್ಷರಸ್ಥ ಸಮಾಜದಲ್ಲಿ ವೃದ್ಧಾಶ್ರಮಗಳೇ ಹೆಚ್ಚಾಗಿ ತಲೆ ಎತ್ತಿ ನಿಂತಿವೆ. ಮನುಷ್ಯ ಹೆಚ್ಚು ಜಾಗತೀಕರಣವಾದಂತೆಲ್ಲಾ ಅವನ ಮನಸ್ಸು ಸಂಕುಚಿತಗೊಳ್ಳುತ್ತಿದೆ. ಇದರಿಂದ ಹೆಚ್ಚಾಗಿ ವಿಭಕ್ತ ಕುಟುಂಬಗಳು ಹುಟ್ಟಿಕೊಳ್ಳುತ್ತಿವೆ.

೨೦೦೨ರಲ್ಲಿ ಎಪ್ಪತ್ತಾರನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಸುಮಶ್ರೀಕಾಂತ ಅಂದರೆ, ಶಾಂತಿಯವರು ಆಯ್ಕೆಯಾದರು. ಉತ್ತರ ಕರ್ನಾಟಕದ ಜಿಲ್ಲೆಗಳ ಎಲ್ಲಾ ಊರಿನ, ಎಲ್ಲಾ ಸಂಘ ಸಂಸ್ಥೆಗಳ ಜನರು ಸ್ನೇಹಿತರು ಅಭಿಮಾನಿಗಳು ಆತ್ಮೀಯರು ಎಲ್ಲರೂ ಶುಭಾಷಯ ಹೇಳಿ ಅಭಿನಂದಿಸುತ್ತಿದ್ದರು. ದಿನನಿತ್ಯ ಒಬ್ಬರಿಲ್ಲಾ ಒಬ್ಬರು ಬಂದು ಶಾಲು ಹೊದಿಸಿ ಸನ್ಮಾನ ಮಾಡುತ್ತಿದ್ದರು. ಸಿಹಿ ಹಂಚಿ ಪಟಾಕಿ ಸಿಡಿಸಿ ಸದ್ದುಮಾಡಿ ಖುಷಿಯಿಂದ ಕುಣಿದಾಡುತ್ತಿದ್ದರು, ಆದರೆ ಶಾಂತಿ ಮನಸ್ಸಿನಲ್ಲಿ ಮಾತ್ರ ಬಿಕೋ ಎನ್ನುವ ಮೌನ ಆವರಿಸಿತು. ಮೌನ ಕಣ್ಣೀರು ಚಡಪಡಿಕೆಗಳ ಮಹಾಪೂರ ಅವಳೆದೆಯಲ್ಲಿ ಕುಣಿದಾಡುತ್ತಿದ್ದವು. ಏಕೆಂದರೆ ಶಾಂತಿಯ ಮಕ್ಕಳು ತಾಯಿಗೆ ಅಭಿನಂದಿಸುವುದಿಲ್ಲ. ಮಕ್ಕಳು ಎಷ್ಟುದೂರವಾದರೂ ಎಂದರೆ, ಶಾಂತಿಯ ಯೋಗ ಕ್ಷೇಮವನ್ನು ಸಹ ಕೇಳುತ್ತಿರಲಿಲ್ಲ. ಮಗಳು ಮಧು ತಾಯಿಯ ಜೊತೆ ಮಾತನಾಡುವುದನ್ನು ಬಿಟ್ಟಿದ್ದಳು, ಶಾಂತಿ ಮಗಳ ಧ್ವನಿಯನ್ನು ಕೇಳಲು ಅವಳ ಮುಖವನ್ನು ನೋಡಲು ಹಾತೊರೆಯುತ್ತಾಳೆ. ಗದಗಿನಲ್ಲಿಯೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ನಡೆಯುತ್ತದೆ. ಶಾಂತಿಗೆ ಅದ್ದೂರಿಯ ಸ್ವಾಗತ ಜನಜಾತ್ರೆ ಬ್ಯಾಂಡು, ಬಾಜಿ, ಡೊಳ್ಳುಕುಣಿತ, ಅಂತ ವಾದ್ಯಗಳ ಅಬ್ಬರ ಹೀಗೆ ಭರ್ಜರಿ ಸ್ವಾಗತ ದೊರೆಯಿತು, ಶಾಂತಿಗೆ ಸಾಂಕೇತಿಕ ಮೆರವಣಿಗೆ ಜನರಿಂದ ಬಿಟ್ಟೂ ಬಿಡದಂತೆ ಅವಳ ಮೇಲೆ ಸುರಿಯುವ ಹೂ ಮಳೆ, ರಸ್ತೆಯ ಆಜುಬಾಜು, ಹಿಂದೆ-ಮುಂದೆ, ಮರಗಿಡ ಮಹಡಿಮಾಳಿಗೆ, ಹೀಗೆ ಎಲ್ಲೆಂದರಲ್ಲಿ ಜನ... ಜನ... ಜನ... ವೇದಿಕೆ ಮೇಲೆ ತುಂಬಿದವು. ಸುಖಃ ಮತ್ತು ದುಃಖಗಳು ಒಟ್ಟಿಗೆಯಾದವು.

ವೇದಿಕೆಯ ಸುತ್ತಮುತ್ತಲೆಲ್ಲ ಸಹಸ್ರ, ಜನರು ನೆರೆದಿದ್ದರು, ಅದರಲ್ಲಿ ಶಾಂತಿ ತನ್ನ ಮಗಳು ಮಧುವಿನ ಮುಖ ಕಾಣುತ್ತದೆ ಏನು ಎಂದು ಹುಡುಕುತ್ತಿದ್ದಳು. ಮಧು ಗದಗದಲ್ಲೇ ಕೆಲಸ ಮಾಡುತ್ತಿದ್ದಳು. ಆದರ ಮಧು ಸಮ್ಮೇಳನಕ್ಕೆ ಬಂದಿರುವುದಿಲ್ಲ ಶಾಂತಿಗೆ ಮತ್ತೆ ನಿರಾಸೆಯಾಯಿತು ಮತ್ತೆ ತನ್ನ ಮಗನಾದರೂ ಬಂದಿದ್ದನೇನೋ ಎಂದು ಅವನನ್ನು ನೋಡಿದಳು ಅವನು ಕೂಡ ಬಂದಿರುವುದಿಲ್ಲ ಇದರಿಂದ ಶಾಂತಿಯ ಮನಸ್ಸಿಗೆ ಬಹಳ ದುಃಖವಾಗುತ್ತದೆ. ಶಾಂತಿಯವರಿಗೆ ಈ ದುಃಖವನ್ನು ಬಹಳ ಸಮಯ ತಡೆಯಲಾಗುವುದಿಲ್ಲ. ದುಃಖ, ಸಂಕಟ, ಸಂತಾಪ, ಕಂಬನಿಗಳ ಮೂಲಕ ಧಾರಾಕಾರವಾಗಿ ಹರಿದವು ಇದನ್ನು ಎಷ್ಟೇ ತಡೆಯಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ, ಶಾಂತಿರವರು ಅಧ್ಯಕ್ಷಿಯ ಭಾಷಣ ಮಾಡುವಾಗ ತನ್ನ ಎದೆಯಾಳದ ನೋವನ್ನು ಹೊರಹಾಕಿದಳು ಮರುದಿನ ಪತ್ರಿಕೆಗಳಲ್ಲಿ ತಾಯಿಯ ಸಂಭ್ರಮ ನೋಡುವ ಸೌಭಾಗ್ಯ ಮಕ್ಕಳಿಗಿಲ್ಲ ಅಂತ ಬರಹ ಪ್ರಕಟವಾಯಿತು. ಮಧುಳನ್ನು ಮಾಧ್ಯಮದವರು ಅಲ್ಲೆ

ಗದುಗಿನ ತೀರಾ ಹತ್ತಿರ ಇರುವುದನ್ನು ಪತ್ತೆ ಹಚ್ಚಿ ಏಕೆ? ಸಮ್ಮೇಳನಕ್ಕೆ ಬರಲಿಲ್ಲ ಎಂದು ಪ್ರಶ್ನೆ ಕೇಳಿದಾಗ ಕಾಲೇಜಿನ ಕೆಲಸದ ಒತ್ತಡದಿಂದಾಗಿ ಸಮ್ಮೇಳನಕ್ಕೆ ಬರುವುದು ಸಾಧ್ಯವಾಗಲಿಲ್ಲ ಎಂಬುದಾಗಿ ಉತ್ತರ ನೀಡಿ ದೂರ ಸರಿದಿದ್ದನ್ನು ಕಾಣಬಹುದು.

ಅಮ್ಮನ (ಶಾಂತಿ) ಕಾರ್ಯಕ್ರಮವನ್ನು ನೋಡಬೇಕು ಅಮ್ಮನಿಗೆ ಪ್ರೋತ್ಸಾಹ ನೀಡಬೇಕು ಎಂದರೆ ಎಂತಹ ಒತ್ತಡಗಳನ್ನಾದರೂ ಮೀರಿಯಾದರೂ ಬರಬಹುದಿತ್ತು, ಆದರೆ ಮಧುಗೆ ಅಮ್ಮನನ್ನು ನೋಡಲು ಇಷ್ಟವಿಲ್ಲದಿರಬಹುದು. ಆದುದರಿಂದಲೇ ಅವಳು ಸಮ್ಮೇಳನಕ್ಕೆ ಬಂದಿಲ್ಲ. ಒಂದು ಫೋನ್ ಕರೆಯನ್ನಾದರೂ ಮಾಡಿ ತಾಯಿಯೊಂದಿಗೆ ಮಾತನಾಡಿರುವುದಿಲ್ಲ. ಸಮ್ಮೇಳನ ಮುಗಿಸಿಕೊಂಡು ಶಾಂತಿ ಸೊಸೆ ಮತ್ತು ಮೊಮ್ಮಕ್ಕಳೊಂದಿಗೆ ಕಲಬುರ್ಗಿಗೆ ಬಂದರು. ಮಗಳು ಮಧು ತನ್ನಿಂದ ಶಾಶ್ವತವಾಗಿ ದೂರಸರಿದಳು, ಅನ್ನುವ ಆಘಾತದಿಂದಾಗಿ ಶಾಂತಿಯ ಆರೋಗ್ಯ ಕುಸಿಯಿತು. ಮೊದಲೇ ಎರಡೂ ಮೊಣಕಾಲು ನೋವಿನಿಂದ ಬಳಲುತ್ತಿದ್ದಳು ಸರಿಯಾಗಿ ಒಂದು ತಿಂಗಳ ಹಿಂದೆ ತನ್ನ ತಾಯಿ ಶರಣಮ್ಮ ತೀರಿಕೊಂಡಿದ್ದಳು ಇದರಿಂದ ನೋವು ಅವಳಿಂದ ಇನ್ನೂ ಆರಿರಲಿಲ್ಲ, ಈಗ ಮಕ್ಕಳು ಈ ಕಟುಕತನ ಅವಳನ್ನು ಮತ್ತಷ್ಟು ಕುಸಿಯುವಂತೆ ಮಾಡಿತು, ರಕ್ತದೊತ್ತಡ ಏರಿತು ರಕ್ತದಲ್ಲಿ ಸಕ್ಕರೆಯ ಅಂಶ ಕಡಿಮೆಯಾಯಿತು. ಹಿಮಗ್ಲೋಬಿನ್ ಕ್ಷೀಣಿಸಿತು. ಪಾದಗಳಲ್ಲಿ ಊತ ಕಂಡುಬಂದಿತು. ತೂಕ ಇಳಿದು ಮುಖದ ಮೇಲಿನ ಮೊದಲ ಕಳೆಗುಂದಿ ಬಣ್ಣ ಕಪ್ಪಾಯಿತು. ಕಣ್ಣುಗಳ ಕೆಳಗೆ ಕಪ್ಪು ಉಂಗುರುಗಳು ಗೋಚರಿಸಿದವು. ರಾತ್ರಿಯಿಡೀ ಜ್ವರ, ಕಣ್ಣು ಮುಚ್ಚಿದರೆ ಆಕಾರ ವಿಕಾರಗಳ ಕನಸುಗಳು ಬೀಳುತ್ತಿದ್ದವು. ಕಣ್ಣು ತೆರೆದರೆ ಕಣ್ಣೀರಿನ ಸುರಿಮಳೆ ಸಂಕಟದ ಸುಳಿಗೆ ಸಿಕ್ಕ ಶಾಂತಿ ಕುಗ್ಗಿ ಹೋದಳು. ಮಾನಸಿಕವಾಗಿ ದೈಹಿಕವಾಗಿಯೂ ಧೈರ್ಯ ಕಳೆದುಕೊಂಡಳು. ಇಂತಹ ಪರಿಸ್ಥಿತಿಯಲ್ಲಿ ಅವಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವ ಗಂಡು ಮಕ್ಕಳು ಇರುವುದಿಲ್ಲ ಪಾಪ ಸುಜಾತ(ಸೊಸೆ) ದವಖಾನೆ, ಡಾಕ್ಟರುಗಳು ಅಂತ ಹೆಚ್ಚಿಗೆ ಗೊತ್ತಿಲ್ಲದಿದ್ದರು. ಅತ್ತೆಯನ್ನು ಆಟೋದಲ್ಲಿ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಎಲ್ಲಾ ರೀತಿಯ ಚಕಪ್‌ಗಳನ್ನು ಮಾಡಿಸಿಕೊಂಡು ಔಷಧಿಗಳನ್ನು ತೆಗೆದುಕೊಂಡು ಬರುತ್ತಾಳೆ.

ಸಮ್ಮೇಳನ ನಡೆದು ಆರು ತಿಂಗಳು ಕಳೆದರು ಶಾಂತಿ ಸಂಪೂರ್ಣವಾಗಿ ಚೇತರಿಸಿಕೊಂಡಿಲ್ಲ. ತಲೆಸುತ್ತು, ಸಂಕಟ, ಅಜೀರ್ಣ ಅಂತ ನರಳುತ್ತಿದ್ದಳು. ಒಂದು ಸಲ ಸೊಲ್ಲಾಪುರಕ್ಕೆ ಹೋಗಿ ಅಲ್ಲಿಯ ನರರೋಗ ತಜ್ಞರಲ್ಲಿ ತಲೆಯ ತಪಾಸಣೆ ಮಾಡಿಸಿಕೊಂಡು ಬರಬೇಕೆನಿಸುತ್ತದೆ. ಆದರೆ ಅವಳನ್ನು ಸೊಲ್ಲಾಪುರಕ್ಕೆ ಕರೆದುಕೊಂಡು ಹೋಗುವವರಾರು ಎಂದು ಮೊಣಕಾಲು ನೋವಿನಿಂದ ಒಬ್ಬಳಿಗೆ ಎಲ್ಲಿ ಓಡಾಡಲು

ಆಗುತ್ತಿರುವುದಿಲ್ಲ. ಸೊಸೆ ಮಕ್ಕಳನ್ನು ಕಟ್ಟಿಕೊಂಡು ಹೇಗೆ ತಿರುಗುತ್ತಾಳೆ ಎಂದು ಅವಳೇ ಸುಮ್ಮನಾಗುತ್ತಾಳೆ. ಎಷ್ಟೇ ನೋವು ಇದ್ದರು ಅದನ್ನು ಸಹಿಸಿಕೊಳ್ಳುತ್ತಾಳೆ. ಮಗ ಮನಮೋಹನನ್ನು ಕರೆಕಳಿಸಿ ಹುಬ್ಬಳ್ಳಿಗೆ ಕರೆದುಕೊಂಡು ಹೋಗು ಇಬ್ಬರು ಒಂದೇ ಕಡೆ ಇದ್ದು ಸಂಸಾರ ಮಾಡ್ರಿ ಎಂದು ಹೇಳಿದಳು. ಆದರೆ ಮಗ ಅದೆಲ್ಲಾ ಆಗಂಗಿಲ್ಲ. ಏಕೆಂದರೆ ನನಗೆ ಬರುವ ಸಂಬಳದಲ್ಲಿ ಮನೆ ಮಾಡುವುದು ಮಕ್ಕಳನ್ನು ಶಾಲೆಗೆ ಕಳುಹಿಸುವುದು ಆಗುವುದಿಲ್ಲ ನೀನೇ ಎಲ್ಲಾವನ್ನು ನೋಡಿಕೋ ಎನ್ನುತ್ತಾನೆ ಅದಕ್ಕೆ ಶಾಂತಿ, "ಹಿಂಗಂದ್ರ ಹ್ಯಾಂಗೋ ಮನು? ನಿನ್ನ ಸಂಸಾರದ ಜವಬ್ದಾರಿ ನೀ ಹೊರೋದು ಯಾವಾಗ? ನನಗೂ ವಯಸ್ಸಾಯ್ತು. ಅರವತ್ತೈದು ದಾಟಿತಲ್ಲ, ಇನ್ನೆಷ್ಟು ದಿನದಕ್ಕಿ ನಾನು?" (ಪು. ೫೮೦) ಹೀಗೆ ಸೊಸೆ ಒಂದು ಕಡೆ, ಮಗ ಒಂದು ಕಡೆ ಇರುವುದನ್ನು ಕಂಡು ಶಾಂತಿ ನೀನು ಮನೆ ಹೆಂಡತಿ ಮಕ್ಕಳಂತ ಜವಬ್ದಾರಿಯನ್ನು ತೆಗೆದುಕೊಳ್ಳಬೇಕು. ನೀನೇ ಅವರನ್ನು ಸಾಕಿ ಸಲಹುಬೇಕು ಎಂದರೆ ಮಗ ನಾನೇನೂ ನನಗ ಮದವಿ ಮಾಡು ಅಂತ ಕೇಳಿರಲಿಲ್ಲ ನೀನೇ ಮಾಡ್ದೀ ನನಗೆ ಮದುವೆನೆ ಬೇಕಾಗಿರಲಿಲ್ಲ ನೀನು ಮಾಡಿದ್ದನ್ನು ನೀನೇ ಅನುಭವಿಸು ಎಂದು ಮಗ ತನ್ನ ಜವಾಬ್ದಾರಿಯಿಂದ ಜಾರಿಕೊಳ್ಳುತ್ತಾನೆ. ಆದರೆ ಶಾಂತಿ ಅನಿವಾರ್ಯವಾಗಿ ಸೊಸೆ ಮತ್ತು ಮೊಮ್ಮಕ್ಕಳ ಜವಾಬ್ದಾರಿಯನ್ನು ಹೊತ್ತುಕೊಂಡಿದ್ದವಳೇ ಹೀಗೆ ಮಗ ಮತ್ತು ಮಗಳ ಅಗಲುವಿಕೆಯಿಂದ ಶಾಂತಿ ನೋವನ್ನು ಅನುಭವಿಸುತ್ತಿದ್ದಾಳೆ. ಶಾಂತಿಯು ತನ್ನ ಮನದಲ್ಲಿ ತನ್ನ ಜೀವನದ ಘಟನೆಗಳನ್ನು ಮೆಲುಕು ಹಾಕುತ್ತ ಬಾಲ್ಯದಲ್ಲಿ ಬಡತನದಿಂದ ಜಾತಿಯ ದಾರಿದ್ರ್ಯದಿಂದ, ಹಲವು ಅಪಮಾನ, ತಿರಸ್ಕಾರ ಸಂಕಟಗಳನ್ನು ಅನುಭವಿಸಿದರೆ ಯೌವ್ವನದಲ್ಲಿ ಸುಖ ಸಿಗಬಹುದು ಎನ್ನುವ ನಂಬಿಕೆಯಿಂದ ವಿವಾಹ ಬಂಧನಕ್ಕೆ ಒಳಗಾಗುತ್ತಾಳೆ. ಶ್ರೀಕಾಂತನನ್ನು ಕಟ್ಟಿಕೊಂಡ ಮೇಲೆ ಇದ್ದದ್ದೂ ಅಧ್ವಾನವಾಗುತ್ತದೆ. ಬಾಣಲೆಯಿಂದ ಬೆಂಕಿಗೆ ಬಿದ್ದಾಂಗಾಗಿ ತನ್ನ ಜೀವನದಲ್ಲಿ ಇದ್ದ ಸ್ವಲ್ಪ ನೆಮ್ಮದಿ ಸುಖ ಎಲ್ಲವೂ ಹಾಳಾಗುತ್ತದೆ. ಮುಪ್ಪಿನಲ್ಲಿದ್ದರು ಮಕ್ಕಳಿಂದ ಒಂದಿಷ್ಟು ನೆಮ್ಮದಿ ಸುಖ ಶಾಂತಿ ಸಿಗುತ್ತದೇನೋ ಎಂದು ಕಾತರದಿಂದ ನಿರೀಕ್ಷಿಸುತ್ತಿದ್ದ ಶಾಂತಿಗೆ ಮತ್ತೆ ನಿರಾಸೆಯಾಯಿತು. ತನ್ನ ಮಗ ಹೆಂಡತಿ ಮಕ್ಕಳನ್ನು ಮತ್ತು ತಾಯಿಯನ್ನು ಅನಾಥರನ್ನಾಗಿ ಮಾಡಿ ದೂರದಲ್ಲಿ ಎಲ್ಲೊ ತಾನೆ ಒಬ್ಬನೆ ಕೆಲಸ ಮಾಡುತ್ತ ತನ್ನ ಹೊಟ್ಟೆಪಾಡು ಒಂದನ್ನೇ ನೋಡಿಕೊಳ್ಳುತ್ತ ಆರಾಮಾಗೆ ಇದ್ದ ಆದರೆ ಮನೆಯ ಯಾವುದೇ ಜವಾಬ್ದಾರಿಯನ್ನು ನಿಭಾಯಿಸದೇ ತನ್ನ ವಯಸ್ಸಾದ ತಾಯಿಗೆ ವಹಿಸಿಹೋಗಿದ್ದ ಶಾಂತಿ, ಈ ಎಲ್ಲಾ ಜವಾಬ್ದಾರಿಗಳನ್ನು ನಿಭಾಯಿಸಿಕೊಳ್ಳುತ್ತ ತನ್ನ ಜೀವನವನ್ನು ಇನ್ನೂ ಸವೆಸುತ್ತಿದ್ದಾಳೆ. ಶಾಂತಿ ಇನ್ನೂ ಜೀವಂತಳಾಗಿದ್ದಾಳೆ. ಅವಳ ಸಮಸ್ಯೆಗಳು ಚಿಂತೆಗಳು ಇನ್ನೂ...

ಜೀವಂತವಾಗಿವೆ ಆದ್ದರಿಂದಲೇ ಅವಳ ಜೀವನ 'ಬಾಕಿ' ಇದೆ ಎಂದು ಗೀತಾ ನಾಗಭೂಷಣರವರು 'ಬಾಕಿ' ಕಾದಂಬರಿಯನ್ನು ನಿರೂಪಣೆ ಮಾಡಿದ್ದಾರೆ.

**೨. ಪುರುಷ ವಿರೋಧಿ ನೆಲೆಗಳು :**

"ಪುರಾತನ ಕಾಲದಿಂದಲೂ ಸಮಾಜ ಪುರುಷ ಪ್ರಧಾನ ಸಮಾಜವಾಗಿದ್ದು 'ಸ್ತ್ರೀ'ಯರಿಗೆ ಹೆಚ್ಚಿನ ಸ್ಥಾನಮಾನ ನೀಡಿರಲಿಲ್ಲ. ಅಲ್ಲದೇ 'ಸ್ತ್ರೀ'ಯರಿಗೆ ಅನೇಕ ರೀತಿಯ ಸವಲತ್ತುಗಳಿಗೆ ಅನರ್ಹವೆಂದು ಮಾಡಲಾಗಿತ್ತು. ಇದರಿಂದಾಗಿ 'ಸ್ತ್ರೀ'ಯು ಪುರುಷರ ಆಳಾಗಿ, ಗುಲಾಮಳಾಗಿ, ಕುಟುಂಬದಲ್ಲಿ ಮನೆಗೆಲಸಕ್ಕೆ ಮಾತ್ರ ಸೀಮಿತವಾದವಳೆಂಬ ಸಂಕುಚಿತ ಭಾವನೆಗಳಿಂದ ಅವಳ ಜೀವನವನ್ನು ನರಕಯಾತನೆಯನ್ನಾಗಿಸಿ ಪುರುಷರ ಭೋಗವಸ್ತುವನ್ನಾಗಿಸಲಾಗಿದೆ. 'ಬಾಕಿ ಕಾದಂಬರಿಯಲ್ಲಿಯೂ ಪುರುಷರು ಮಹಿಳೆಗೆ ತೊಂದರೆ ಕೊಡುವುದನ್ನು ಮತ್ತು ಅವರ ಮನಸ್ಸಿಗೆ ನೋವುಂಟು ಮಾಡುವುದನ್ನು ಕಾಣುತ್ತೇವೆ.

ಶಾಂತಿ ಕಛೇರಿ ಕೆಲಸವನ್ನು ಮುಗಿಸಿಕೊಂಡು ಹಿರಿಯ ವ್ಯಕ್ತಿಯಾದ ಬಸವಲಿಂಗಪ್ಪನೊಂದಿಗೆ ಮನೆಗೆ ಬರುತ್ತಿದ್ದಳು. ಇದನ್ನು ಕಂಡಂತಹ ಕಛೇರಿ ಕೆಲಸದ ಹರೆಯದ ಹುಡುಗರು ಶಾಂತಿಗೆ ಈ ರೀತಿಯಾಗಿ ಚೇಡಿಸುತ್ತಿದ್ದರು. "ಯಾಕಪಾ ದೋಸ್ತಾ... ಬಾಡಿ ಗಾರ್ಡಗ ಇಟ್ಗೊಂಡಿಯೇನು? ದಿನಾ ಅವನ ಜೋಡಿನೇ ಮನೀಗಿ ಹೋಗ್ತಿ?.. "(ಪು. ೨೫೬) ಎಂದು ಅವಳ ಮನಸ್ಸಿಗಿ ನೋವುಂಟು ಮಾಡುತ್ತಿದ್ದರು. ಮಹಿಳೆಯರು ಮನೆಯಿಂದ ಹೊರಗಡೆ ಬರುವುದೇ ಕಷ್ಟ ಸಾಧ್ಯವಾಗಿದ್ದ ಕಾಲದಲ್ಲಿ ಶಾಂತಿ ತನ್ನ ತಂದೆಯ ಸಹಕಾರದಿಂದ ಕಲಬುರ್ಗಿಯ ಜಿಲ್ಲಾ ಕಛೇರಿಯಲ್ಲಿ ದ್ವಿತೀಯ ದರ್ಜೆಯ ಸಹಾಯಕಿಯಾಗಿ ಕೆಲಸಕ್ಕೆ ಸೇರಿದ್ದಳು. ಇದರಿಂದ ಎಲ್ಲಾ ಗಂಡಸರು ಹುಬ್ಬನ್ನು ಏರಿಸಿದ್ದರು, ಅವಳಿಗೆ ಹೇಗಾದರೂ ಮಾಡಿ ತೊಂದರೆ ಕೊಡಬೇಕು ಎಂದು ಶಾಂತಿಗೆ ಚುಚ್ಚು ಮಾತುಗಳನ್ನು ಆಡುತ್ತಿದ್ದರು. ಶಾಂತಿಯನ್ನು ದುರುಗುಟ್ಟಿ ನೋಡುತ್ತಿದ್ದರು. ಶಾಂತಿ ಕಛೇರಿ ಕೆಲಸದ ಜೊತೆಗೆ ಪದವಿ ಶಿಕ್ಷಣವನ್ನು ಮಾಡುತ್ತಿದ್ದಳು. ಬೆಳಿಗ್ಗೆ ಕಛೇರಿಗೆ ಬರುವುದು ಸ್ವಲ್ಪ ತಡವಾದರು ಅದನ್ನು ದೊಡ್ಡದೆಂದು ಬಿಂಬಿಸುತ್ತಿದ್ದರು. ಆದರೆ ಗಂಡಸರು ಬೆಳಿಗ್ಗೆ ರಿಜಿಸ್ಟರ್ ಪುಸ್ತಕದಲ್ಲಿ ಸಹಿ ಮಾಡಿ ಹೋಟೆಲ್‌ಗಳಿಗೆ ಹೋದರೆ ಎರಡು ಮೂರು ತಾಸು ಗಟ್ಟಲೇ ಅಲ್ಲೇ ಹರಟೆ ಹೊಡೆಯುತ್ತಾ ಕುಳಿತುಕೊಳ್ಳುತ್ತಿದ್ದರು. ಆದರೆ ಶಾಂತಿ ಯಾವ ಹೋಟೆಲ್‌ಗಳಿಗೆ ಹೋಗುತ್ತಿರಲಿಲ್ಲ. ಕೆಲಸಕ್ಕೇ ಬಂದು ಕುಳಿತ್ತಾಳೆಂದಲೇ ಅವಳು ಏಳುವುದು ಸಾಯಂಕಾಲ ಮನೆಗೆ ಹೋಗುವ ಸಮಯಕ್ಕೆ ಮಾತ್ರ ಅಷ್ಟು ನಿಷ್ಟೆಯಿಂದ ಕೆಲಸ ಮಾಡುತ್ತಿದ್ದಳು.

ಶಾಂತಿ ಕಾಲೇಜಿನಲ್ಲಿ ಓದುತ್ತಿರುವಾಗ ಎಸ್.ಆರ್.ಪಾಟೀಲ್ ಎಂಬುವರು ತೊಂದರೆ ಕೊಡುತ್ತಿರುತ್ತಾನೆ. ಒಮ್ಮೆ ಶಾಂತಿ ಕಾಲೇಜು ಮುಗಿಸಿಕೊಂಡು ಕಛೇರಿಗೆ ಬರುವಾಗ ರಸ್ತೆಯಲ್ಲಿ ಪಾಟೀಲ್‌ರವರು ತಡೆದು ನನ್ನನ್ನು ಕ್ಷಮೆ ಕೇಳಬೇಕು ಎಂದು ಪೀಡಿಸುತ್ತಾನೆ.

"ತಪ್ಪಿಲ್ಲ ಏನಿಲ್ಲ, ಈಗ ನೀವು ನನಗ ಕ್ಷಮೆ ಕೇಳ್ಬೇಕು, ಇಲ್ಲಂದ್ರ ನೀವು ಇಲ್ಲಿಂದ ಅದ್ಹ್ಯಾಂಗ ಹೋಗ್ತಿರೋ ನೋಡ್ತೀನಿ" (ಪು. ೨೭೧) ಅಂದು ನಿರ್ಜನ ರಸ್ತೆಯಲ್ಲಿ ಅಡ್ಡಗಟ್ಟಿ ಅವಳಿಗೆ ಹೆದರಿಸುತ್ತಾನೆ. ಅದಕ್ಕೆ ಶಾಂತಿ ನಲುಗಿ ಹೋಗುತ್ತಾಳೆ. ಮುಗ್ಧ ಮನಸ್ಸಿನ ಶಾಂತಿ ಆ ರಸ್ತೆಯಲ್ಲಿ ಓಡಾಡುವುದನ್ನೇ ಬಿಟ್ಟು ಬೇರೆ ದಾರಿಯಿಂದ ಕಛೇರಿಗೆ ಬರುತ್ತಾಳೆ. ಇದಾದ ನಂತರ ಕಛೇರಿಯಲ್ಲಿ ಶಾಂತಿಯ ಹೆಸರಿಗೆ ಅನಾಮಧೇಯ ಪತ್ರಗಳು ಬರಲು ಶುರುವಾಗುತ್ತವೆ. ಅವುಗಳಲ್ಲಿ ಪ್ರೇಮನಿವೇದನೆ ಮತ್ತು ಬೈಗುಳುಳ್ಳ ಸುರಿಮಳೆಯೇ ಸುರಿಸುತ್ತಿದ್ದವು. ಅಲ್ಲಲ್ಲಿ ಅಶ್ಲೀಲ ಪದಗಳಿದ್ದು ಅಸಹನೆ ಬರಿಸುವಂತಿದ್ದವು. ಇವುಗಳಿಂದ ಶಾಂತಿಗೆ ಶಾಕ್ ತಗಲಿದ್ದಂತಾಗಿ ತಲೆ ತಿರುಗಿ ದುಃಖ ಹೊರಬರುತ್ತಿತ್ತು. ಅವಳು ಎಷ್ಟೇ ತಡೆಯಲು ಪ್ರಯತ್ನಿಸಿಕೊಂಡರು ಕಣ್ಣಿನಿಂದ ಪಟ ಪಟನೆ ಕಂಬನಿಯ ಹನಿಗಳು ಉದುರುತ್ತಿದ್ದವು.

ಶಾಂತಿ ತನ್ನ ಸ್ವ-ಸಾಮರ್ಥ್ಯದಿಂದ ಕೆಲಸ ಮಾಡಿಕೊಂಡು ಬದುಕುತ್ತಿದ್ದರು. ಅವಳನ್ನು ಬಾಳಲು ಈ ಪುರುಷರು ಬಿಡುತ್ತಿರಲಿಲ್ಲ. ಒಂದಲ್ಲಾ ಒಂದು ಸಮಸ್ಯೆಗಳು ಎದುರಾಗುತ್ತಿದ್ದವು. ಆದರೆ ಶಾಂತಿ ಎದೆಗುಂದದೆ, ಅದನ್ನು ಧೈರ್ಯದಿಂದಲೇ ಎದುರಿಸಲು ಸಿದ್ಧವಾಗುತ್ತಿದ್ದಳು. ಶಾಂತಿಯ ತಂಗಿಯಾದ 'ಚಂದ್ರಕಲಾ'ಗೆ ಈ ಪುರುಷ ಸಮಾಜದಿಂದ ಅವಳ ಜೀವನವೇ ಹಾಳಾಗುತ್ತದೆ. "ಏನಗ್ಯಾದ ಮಗಾ ನಿನಗ? ಗಂಡನ ಮನ್ಯಾಗ ನೀ ಛೊಲೋ ಇದ್ದಿ ಅಂತ ತಿಳ್ಕೊಂಡಿದ್ದೇವಲ್ಲೇ ತಾಯೀ... ಈ ಪಾಟಿ ಸೊರಗಿ ಮೈಯಾಗ ಬರೇ ಎಲ್ಬು ತೊಗಲು ಎಡ್ಡೆ ಉಳದಾವಲ್ಲೇ ಚಂದ್ರೂ... ಅಲ್ಲೇನು ತರಸದ ನಿನಗ? ಹೊಟ್ಟೇಗಿ ಕೂಳ ಹಾಕ್ತನಾ ಇಲ್ಲಾ ನಿನ್ ಗಂಡ? (ಪು. ೨೮೫) ತಾಯಿ ಶರಣಮ್ಮ ತನ್ನ ಮಗಳನ್ನು ಮನೆಗೆ ಕರೆದುಕೊಂಡು ಬಂದಾಗ ಅವಳಿಗೆ ನಿನ್ನ ಗಂಡನ ಮನೆಯಲ್ಲಿ ಏನಾದರೂ ಕಷ್ಟವಿದೆಯೇ ಎಂದು ಕೇಳುತ್ತಾಳೆ. ಅದಕ್ಕೆ ಚಂದ್ರಕಲಾ ಕಣ್ಣೀರನ್ನು ಸುರಿಸುತ್ತಾಳೆ. ಅವಳು ಗಂಡನ ಮನೆಯಲ್ಲಿ ಸುಖವಾಗಿರುವುದಿಲ್ಲ. ಅವಳ ಗಂಡನ ಮನೆಯವರು ಇವರಿಗೆ ಹೊಲ ಮನೆ ಇದೆ. ಎಂದು ಸುಳ್ಳು ಹೇಳಿ ಮದುವೆಯಾಗಿರುತ್ತಾನೆ. ಇವಳ ಗಂಡ ಯಾವ ಕೆಲಸವನ್ನು ಮಾಡದೇ ಊರಿನಲ್ಲಿ ಗೂಳಿಯಂತೆ ತಿರುಗುತ್ತಿರುತ್ತಾನೆ. ಅವನಿಗೆ ಅದೇ ಊರಿನಲ್ಲಿ ಬೇರೆಯೊಬ್ಬ 'ಸ್ತ್ರೀ'ಯ ಜೊತೆ ಸಂಬಂಧವನ್ನು ಬೆಳಸಿಕೊಂಡಿರುತ್ತಾನೆ. ಅವನು ಯಾವಾಗ ಅವಳ ಮನೆಯಲ್ಲಿಯೇ ಇರುತ್ತಾನೆ. ಚಂದ್ರಕಲಾ ಇರುವ ಮನೆಗೆ ಅಮವಾಸ್ಯೆಗೂ, ಹುಣ್ಣಿಮೆಗೂ ಒಂದು ಸಾರಿ

ಬರುತ್ತಿರುತ್ತಾನೆ. ಕುಡಿದು ಹೊಡೆಯುವುದು ಬೈಯುವುದು ಮಾಡುತ್ತಾನೆ. ಚಂದ್ರಕಲಾ ತನ್ನ ಅತ್ತೆ ಮಾವರ ಜೊತೆ ಕೂಲಿ ಕೆಲಸಕ್ಕೆ ಹೋಗುತ್ತಿರುತ್ತಾಳೆ. ಅಲ್ಲಿ ತಲೆಯ ಮೇಲೆ ಉಸುಗು ಇಟ್ಟಂಗಿ, ಸಿಮೆಂಟು ಹೊತ್ತು ತಲೆಯ ಮೇಲಿನ ಕೂದಲೆಲ್ಲಾ ಉದುರಿರುತ್ತವೆ. ಅವಳಿಗೆ ಹೊಟ್ಟೆಯ ತುಂಬಾ ಊಟ ಸಹ ಇರುತ್ತಿರಲಿಲ್ಲ. ಇದಕೆಲ್ಲಾ ಕಾರಣವೆಂದರೆ, ಚಂದ್ರಕಲಾನನ್ನು ಸುಳ್ಳು ಹೇಳಿ ಮದುವೆಯಾಗಿದ್ದು.

ಚಂದ್ರಕಲಾ ಮದುವೆಯಾದಾಗ "ಚೆಲು ಚೆಲು ಅವರಿ ಹುವ್ವಿನಂಗಿದ್ದ ಪೋರಿಯ ಮಾರಿ ಬತ್ತಿ ಹೋಗಿತ್ತು. ಒಳ್ಳೆಯ ರಸಪುರಿ ಮಾವಿನ ಹಣ್ಣಿನಂಗಿದ್ದ ಚಂದ್ರೂ ಗಾಣಕ್ಕೆ ಕೊಟ್ಟ ಕಬ್ಬಿನ ಜಲ್ಲಿ ಹಂಗ ಹಿಂಡಿ ಹಿಪ್ಪಿ ಆಗಿದ್ದಳು" (ಪು. ೨೮೫) ಪ್ರತಿಯೊಬ್ಬ ಹೆಣ್ಣು ಮಕ್ಕಳು ತವರಿನಲ್ಲಿ ಸುಖವಾಗಿ ಬೆಳೆದಿರುತ್ತಾರೆ. ಆದರೆ ಗಂಡನ ಮನೆಯಲ್ಲಿ ಏನೇ ಕಷ್ಟಗಳು ಬಂದರೂ ನೋವುಗಳು ಬಂದರು, ಅವುಗಳನ್ನು ಎದುರಿಸಿ ಬಾಳಬೇಕೆಂದು ಹೇಳಿ ಹೆಣ್ಣು ಮಕ್ಕಳನ್ನು ಬೆಳೆಸುತ್ತಾರೆ. ಆದರೆ ಗಂಡನಾದವನು ಹೆಂಡತಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಅವಳ ಮಕ್ಕಳನ್ನು ಏರುವ ಯಂತ್ರ ಎಂದು ಭಾವಿಸಬಾರದು. ಅವಳ ಆಸೆ ಆಕಾಂಕ್ಷೆಗಳನ್ನು ಈಡೇರಿಸಬೇಕು. ಪುರುಷರು ಅಧಿಕ ಒತ್ತಡವನ್ನು ಅವಳ ಮೇಲೆ ಹೇರಬಾರದು. ದೌರ್ಜನ್ಯವನ್ನು ಮಾಡಬಾರದು. ಆದರೆ ಚಂದ್ರಕಲಾ ಗಂಡ ಅವಳನ್ನು ಒಂದು ದಿನವಾದರೂ ಚೆನ್ನಾಗಿ ನೋಡಿಕೊಂಡಿರುವುದಿಲ್ಲ. ಅವಳಿಗೆ ಮಗುವಾದಗಲೂ ಅವಳನ್ನು ನೋಡಲು ಬರುವುದಿಲ್ಲ. ಚಂದ್ರಕಲಾನ ಬಾಳಲ್ಲಿ ಅವಳ ತಂದೆ-ತಾಯಿ ಗಂಡ ಮಾಡಿದ ತಪ್ಪಿಗೆ, ಮೋಸಕ್ಕೆ ಒಬ್ಬ ಅಮಾಯಕ ಹೆಣ್ಣು ಮಗಳ ಜೀವ ಬಲಿಯಾಗುತ್ತದೆ. ತನ್ನ ಗಂಡನ ಚಿಂತೆಯಲ್ಲಿ ಅವಳು ಕೊರಗಿ ಕೊರಗಿ ಸಾಯುತ್ತಾಳೆ. ತಂದೆ-ತಾಯಿಯರು ಅವಳಿಗೆ ಬೇರೆ ಮದುವೆಯಾಗಲೂ ಹೇಳಿದರೂ. ಅವಳು ಒಪ್ಪದೇ ಅವನ ನೆನಪಿನಲ್ಲಿ ಕೊನೆಯುಸಿರೆಳೆಯುತ್ತಾಳೆ. ಈ ಸಮಾಜದಲ್ಲಿ ಯಾರಿಗೂ ತೊಂದರೆ ಕೊಡದೇ ತಮ್ಮ ಪಾಡಿಗೆ ತಾವು ಬದುಕುತ್ತಿರುವವರನ್ನು ಸುಮ್ಮನೆ ಬಿಡುವುದಿಲ್ಲ. ಈ ಜನ ಅದೇ ರೀತಿ ಶಾಂತಿಯ ಬಾಳಲ್ಲಿ ಮತ್ತೊಂದು ಕೆಟ್ಟ ಅನುಭವ ಈ ರೀತಿಯಾಗುತ್ತದೆ.

"ಅಯ್ಯಾ... ಶಾಂತಿ ಸುದ್ದಿ ಕೇಳಿರೇನು? ಅಕಿಗಿ ಗಂಡ ಬಿಟ್ಟಾನಂತ... "ಬಿಡಲ್ದಾರೆ ಏನು ಮಾಡ್ತಾನ ಪಾಪ... ಅಂವಾ ಹಳ್ಳಿಮುಕ್ಕಾ... ಇಕಿ ಗಂಡಗೋವಿ ಹಂಗ ಕಟ್ಟಿ ಕಚೇರ್‍ಯಾಗ ಗಂಡಸರ ನಡಬರಕ ಕುಂತು ಕಾರುಬಾರ ಮಾಡಿ ಬಂದಕ್ಕಿ ಹೆಚ್ಚು ಓದೀನಿ ಅನ್ನೋ ಧಿಮಾಕು ಬ್ಯಾರೆ. ಇಂಥಕ್ಕಿ ಗಂಡನ ಗೂಡ ಸಂಸಾರ ಮಾಡ್ತಾಳಾ ಕೋಡಿ.. ನಡು ಮಧ್ಯಾಣದಾಗೇ ನೆತ್ತಿ ಮ್ಯಾಲ ಚಾಪಿ ಹಾಕ್ಕೊಂಡು ಬಂದು ಬಿಟ್ಟಾಳ..." (ಪು. ೪೧೯) ಶಾಂತಿ ಶಿವಣ್ಣನನ್ನು ಮದುವೆಯಾಗಿ ಕೆಲವೇ ದಿನಗಳಲ್ಲಿ ಅವರ ಸಂಬಂಧ

ಮುರಿದು ಬೀಳುತ್ತದೆ. ಏಕೆಂದರೆ ಅವನು ದಿನ ನಿತ್ಯ ಕುಡಿದು ಶಾಂತಿಯನ್ನು ಬಡಿಯುವುದು ಬೈಯುವುದು ಮಾಡುತ್ತಿರುತ್ತಾನೆ. ಅವಳನ್ನು ಯಾವಾಗಲೂ ಅನುಮಾನಿಸುತ್ತಿರುತ್ತಾನೆ. ಅವನ ದುಡಿಮೆಯ ಹಣವನ್ನೆಲ್ಲಾ ಕುಡಿದು, ಬೇರೆ ಹೆಣ್ಣು ಮಕ್ಕಳ ಸಹವಾಸ ಮಾಡಿ ಹಣ ವ್ಯಯ ಮಾಡುತ್ತಿರುತ್ತಾನೆ. ಮನೆಯ ಸಂಸಾರಕ್ಕೆ ಒಂದು ರೂಪಾಯಿಯನ್ನು ಸಹ ಕೊಡುತ್ತಿರಲಿಲ್ಲ. ಶಾಂತಿಯ ದುಡಿಮೆಯಲ್ಲಿ ಕುಡಿಯಲು ಹಣ ಕೇಳುತ್ತಿರುತ್ತಾನೆ. ಶಾಂತಿ ಕೊಡುವುದಿಲ್ಲ ಎಂದಾಗ ಕಿರಿ ಕಿರಿ ಶುರುವಾಗುತ್ತದೆ. ದಿನಾಲು ಅವಳನ್ನು ಬೈಯುವುದು ಹೊಡೆಯುವುದು ಇದರಿಂದ ಶಾಂತಿಗೆ ರೋಸಿ ಅವನಿಗೆ ತಲಾಕ್ (ವಿಚ್ಛೇದನ) ನೀಡುತ್ತಾಳೆ. ಅವಳ ಸುತ್ತಮುತ್ತಲಿರುವ ಜನರು ಇವಳದೇ ತಪ್ಪು ಎನ್ನುವ ಹಾಗೇ ಶಾಂತಿಯನ್ನು ಎಲ್ಲರೂ ಆಡಿಕೊಳ್ಳುತ್ತಾರೆ. ಹೀಗೆ ಎಲ್ಲಾ ನೋವುಗಳನ್ನು ಅವಮಾನಗಳನ್ನು ಸಹಿಸಿಕೊಂಡು ಬರುತ್ತಾಳೆ. ಇಂತಹ ಘಟನೆಗಳೇ ಶಾಂತಿಯನ್ನು ಒಬ್ಬ ಸಮರ್ಥ ಬಂಡಾಯ ಲೇಖಕಿಯಾಗಲು ಸಾಧ್ಯವಾಗುತ್ತದೆ. "ಎಪ್ಪತ್ತರ ದಶಕವು ಇತಿಹಾಸದಲ್ಲಿ ಅತ್ಯಂತ ಪರಿವರ್ತನೀಯ ಕಾಲಘಟ್ಟ, ಇದೇ ಅವಧಿಯಲ್ಲಿ ಬೆಳೆದುಬಂದ ಸ್ತ್ರೀವಾದಿ ಚಿಂತನಾಕ್ರಮವು ಸ್ತ್ರೀ ಕೇಂದ್ರಿತ ಬದುಕನ್ನಾಧರಿಸಿ ಹಲವಾರು ಅಂಶಗಳನ್ನು ಬೆಳಕಿಗೆ ತಂದಿತು. ಅಂತಹವುಗಳಲ್ಲಿ ಮಹಿಳೆಯ ಮೇಲಿನ ದೌರ್ಜನ್ಯವು ಒಂದಾಗಿದೆ. ಜಾತಿ, ವರ್ಗ, ವರ್ಣಾಧಾರಿತ ನೆಲೆಗಳಲ್ಲಿ ಸ್ತ್ರೀಯರನ್ನು ಹಿಂಸಿಸುತ್ತಾರೆ. 'ಸತಿಸಹಗಮನ ಪದ್ಧತಿ, ಬಾಲ್ಯವಿವಾಹ, ವಿಧುರವಿವಾಹ, ಇಂತಹ ಪದ್ಧತಿಗಳಿಗೆ ಬಲಿಯಾಗುವುದು ಮಾತ್ರ ಸ್ತ್ರೀಯರು ಪುರುಷರ ಹಿತದೃಷ್ಟಿಗೆಂದು ಸ್ತ್ರೀಯರನ್ನು ಬಲಿತೆಗೆದುಕೊಳ್ಳುತ್ತಾರೆ. ಅಂತಹ ಪದ್ಧತಿಗಳನ್ನು ಮೀರುವ ಸ್ತ್ರೀಯರನ್ನು 'ಬಾಕಿ' ಕಾದಂಬರಿಯಲ್ಲಿ ವಿವರಿಸಿದ್ದಾರೆ.

"ನಿಮ್ಮ ರೀತಿ ರಿವಾಜು ಏನೇ ಇರ್ಲಿ... ನಾ ತೆಲಿ ಬೋಳಿಸ್ಗೊಂಡು ವಿಕಾರ ಆಗಂಗಿಲ್ಲ ಕೆಂಪು ಸಿರಿ ಉಟ್ಗೊಂಡು ಮುಲ್ಯಾಗ ಕುಂತು ದೇರಿಗಿ ಬತ್ತಿ ಹೊಸೆಂಗಿಲ್ಲ.. ಈಗ ನಾ ಹ್ಯಾಂಗಿದ್ದೀನೋ ಹಿಂಗೇ ಇರುವಾಕೀ ಗಂಡನ ಜೋಡಿ ಬಂದಿರೋ ಈ ಕರಿಮಣಿ ತಾಳಿ ತಗೀತೀನಿ ಅಷ್ಟೇ." (ಪು. ೨೧೮) ಸರಸ್ವತಿಬಾಯಿ ಮರಾಠಿ ಹೆಣ್ಣುಮಗಳು ಇವಳ ಗಂಡ ಸತ್ತಾಗ ಹರೆಯದ ವಯಸ್ಸು ಎರಡು ಹೆಣ್ಣುಮಕ್ಕಳಿದ್ದವು. ಗಂಡ ಸತ್ತಾಗ ಅತ್ತೆ-ಮಾವ ಊರಿನ ಹಿರಿಯರೆಲ್ಲಾ ಸೇರಿ ರೀತಿ ರಿವಾಜುಗಳಂತೆ ತಲೆಬೋಳಿಸಿ, ಕೆಂಪುಸಿರಿ ಉಡುಸಿ ಮನೆಯ ಮೂಲೆಯಲ್ಲಿ ಕೂಡಿಸಲು ಬಹಳ ಜಬರದಸ್ತಿ ಮಾಡಿದ್ದರು. ಆದರೆ ಸರಸ್ವತಿಬಾಯಿ ಒಪ್ಪಿಕೊಳ್ಳದೇ ಅವುಗಳನ್ನು ದಿಟ್ಟತನದಿಂದ ಎದುರಿಸಿ ನಿಲ್ಲುತ್ತಾಳೆ. ಅದಕ್ಕಾಗಿಯೇ ಇವಳಿಗೆ ಮತ್ತು ಇವಳ ಮಕ್ಕಳಿಗೆ ತನ್ನ ಗಂಡನ ಆಸ್ತಿಯನ್ನು ಕೊಡದೇ ಅವನ ಮನೆಯಿಂದ ಹೊರಹಾಕುತ್ತಾರೆ. ಈ ಪುರುಷ ಸಮಾಜ, ಸರಸ್ವತಿಬಾಯಿ ಒಬ್ಬ

ದಿಟ್ಟ ಮಹಿಳೆ. ಆಸ್ತಿಕೊಡಲಿಲ್ಲವೆಂದು ಎದೆಗುಂದದೇ ತನ್ನ ಮಕ್ಕಳೊಂದಿಗೆ ಕಲಬುರ್ಗಿಗೆ ಬಂದು ಬಾಡಿಗೆ ಮನೆಯಲ್ಲಿ ನೆಲೆಸಿ ಟೆಲರ್‌ಮಿಷನ್ ಹೊಲೆಯುತ್ತಾ ತನ್ನ ಮಕ್ಕಳನ್ನು ಸಾಕುತ್ತ ಜೀವನ ನಡೆಸುತ್ತಾಳೆ. ಸರಸ್ವತಿಬಾಯಿ ತನ್ನ ಗಂಡನ ಸಾಕಷ್ಟು ಆಸ್ತಿ ಇದ್ದರೂ ಅವಳು ಕಷ್ಟಪಟ್ಟು ಜೀವನ ನಡೆಸುತ್ತಿರುತ್ತಾಳೆ. ಇದಕ್ಕೆ ಕಾರಣ ವ್ಯವಸ್ಥೆಯನ್ನು ಪ್ರಶ್ನಿಸುವುದು ಮತ್ತು ಮೀರಿರುವುದೇ ಕಾರಣವೆಂಬಂತೆ ಈ ಪುರುಷ ಪ್ರಧಾನ ಸಮಾಜ ಬಿಂಬಿಸುತ್ತದೆ.

"ನೀನು ನನಗ ಮ್ಯಾಚ ಆಗಂಗಿಲ್ಲ... ನಾ ಇನ್ನೊಂದು ಮದವಿ ಮಾಡ್ಕೋತೀನಿ ಅಂತ... ಅದಕ್ಕಕಿ ಒಂದ್ಯಾಕ ಹತ್ತು ಮಾಡ್ಕೋ.. ನಂದೇನು ಗಂಟು ಹೋಗ್ತಾದ ಅಳವನಿಗಿ ಅರವತ್ತು ಮಂದಿ ಹೆಂಡ್ರಂತ... ಅಂತ ಅಂದಿದ್ದಳು, ಅದನ್ನಕಿ ಗಂಭೀರವಾಗಿ ಪರಿಗಣಿಸಿಯೇ ಇಲ್ಲ... " (ಪು ೪೫೭) ಶ್ರೀಕಾಂತ ತನ್ನ ಮೊದಲ ಹೆಂಡತಿಯಾದ ಮಾಯಾಳಿಗೆ ಮೋಸ ಮಾಡಿ ಶಾಂತಿಯನ್ನು ಮದುವೆಯಾಗುತ್ತಾನೆ. ಮಾಯಾಳಿಂದ ಒಪ್ಪಿಗೆ ತೆಗೆದುಕೊಂಡು ಬಂದಿದ್ದೇನೆ ಎಂದು ಹೇಳುತ್ತಾನೆ. ಗಂಡ ಹೆಂಡತಿ ಜಗಳ ಮಾಡುವಾಗ ನಾನು ಇನ್ನೊಂದು ಮದುವೆ ಆಗುತ್ತೇನೆ ಎಂದು ಮಾಯಾಳಿಗೆ ಹೇಳಿದ ಅಷ್ಟೇ ನಾನು ಶಾಂತಿಯನ್ನೇ ಮದುವೆ ಆಗುತ್ತೇನೆ ಎಂದು ಹೇಳಿರಲಿಲ್ಲ. ಇಲ್ಲಿ ಮಾಯಾ ಮತ್ತು ಶಾಂತಿ ಇಬ್ಬರಿಗೂ ಮೋಸಗೊಳಿಸುತ್ತಾನೆ.

ಶ್ರೀಕಾಂತ ಜವಳಿ ವ್ಯಾಪಾರಿಯಾಗಿದ್ದರಿಂದ ಅವನು "ಬೊಂಬಾಯಿ ಡೆಲ್ಲಿ, ಮದ್ರಾಸು, ಕಂಚಿ, ಅಂತ ಬ್ಯಾರೆ ಊರಾಗ ಬೇಕಾದೋಸು ಹೆಣ್ಣುಗೊಳಿಗಿ ಅನುಭವಿಸ್ತೀನಿ.. ನಿಂದೇನು ಮಹಾ... "(ಪು. ೪೯೬) ಈತನು ಬೇರೆ ಸ್ತ್ರೀಯರೊಂದಿಗೆ ಅಕ್ರಮ ಸಂಬಂಧವನ್ನು ಹೊಂದಿರುತ್ತಾನೆ. ಈ ವಿಷಯ ತಿಳಿದ ಶಾಂತಿಗೆ ತುಂಬಾ ಆಘಾತವಾಯಿತು. ಶ್ರೀಕಾಂತನನ್ನೇ ನಂಬಿ ಅವಳ ತಂದೆ-ತಾಯಿ ಕೆಲಸ ಮನೆ ಎಲ್ಲವನ್ನು ಬಿಟ್ಟು ಬಂದಿರುತ್ತಾಳೆ. ಶಾಂತಿ ಏಕಾಂಗಿಯಾಗಿ ಅವಳ ಬೆಂಬಲಕ್ಕೆ ಯಾರು ಇಲ್ಲವೆಂದು ತಿಳಿದು ಶ್ರೀಕಾಂತ ಶಾಂತಿಗೆ ಎಲ್ಲಾ ರೀತಿಯ ಹಿಂಸೆ, ನೋವುಗಳನ್ನು ಕೊಡುತ್ತಿರುತ್ತಾನೆ. ಆದರೆ ಶ್ರೀಕಾಂತ ಮಾಯಾಳಿಗೆ ಮತ್ತು ಅವಳ ಮಕ್ಕಳಿಗೆ ಮೋಸ ಮಾಡಲು ಸಾಧ್ಯವಾಗುವುದಿಲ್ಲ. ಏಕೆಂದರೆ ಅವಳಲ್ಲಿ ಹಣಬಲ, ತೋಳ್ಬಲ ಇರುತ್ತದೆ. ಅಣ್ಣ ತಮ್ಮಂದಿರ ಬೆದರಿಕೆಯಿಂದ ಶ್ರೀಕಾಂತನನ್ನು ಹಿಡಿತದಲ್ಲಿಟ್ಟುಕೊಂಡಿರುತ್ತಾಳೆ. ಆದರೂ ಮಾಯಾಳಿಗೆ ಶಾಂತಿಯ ಮೇಲೆ ಅಸಮಾಧಾನ ಇರುತ್ತದೆ.

'ಶಾಂತಿ' ಶ್ರೀಕಾಂತನನ್ನು ಮದುವೆಯಾದ ವಿಚಾರ ಶಾಂತಪ್ಪ ಮತ್ತು ಶರಣಮ್ಮಗೆ ಬರಸಿಡಿಲು ಬಡಿದಂತಾಗುತ್ತದೆ. ಅವರ ಸಂಸಾರದಲ್ಲಿ ಅಸ್ಫೋಟಗೊಳ್ಳುತ್ತದೆ. ನೆಲ ಸೀಳಿಕೊಂಡು ಲಾವರಸ ಉಕ್ಕಿದಂತೆ ಶರಣಮ್ಮ ತನ್ನ ಎದೆಯ ಬಡಿದುಕೊಂಡು

ಅಳುತ್ತಾ ನನ್ನ ಮಗಳು ಶಾಂತಿ ಸತ್ತಳು ಎಂದು ಅವಳನ್ನು ಮನೆಯಲ್ಲಿ ಇತರರು ಯಾರು ನೋಡಬಾರದು, ಮಾತನಾಡಬಾರದು ಎಂದು ಎಲ್ಲರಿಗೂ ಹೇಳುತ್ತಾಳೆ. ಇದಕ್ಕೆ ಕಾರಣ ಶ್ರೀಕಾಂತ ಶಾಂತಿಯ ತಲೆಯನ್ನು ಕೆಡಿಸಿ ಮದುವೆಯಾಗಿದ್ದೆ ಕಾರಣ ಎಂದು ಹೇಳಬಹುದು. ಅಷ್ಟೇ ಅಲ್ಲದೇ ಶಾಂತಿ ಎಂ.ಎ.ಪದವಿಯಲ್ಲಿ ಉತ್ತೀರ್ಣಳಾದಳು ಕಲಬುರ್ಗಿಯ ಶ್ರೀನಗರೇಶ್ವರ ಶಿಕ್ಷಣ ಸಂಸ್ಥೆಯಲ್ಲಿ ಪ್ರೌಢಶಾಲಾ ಮುಖ್ಯೋಪಾಧ್ಯಾಯಿನಿಯಾಗಿ ಕೆಲಸಕ್ಕೆ ಸೇರಿದಳು. ಶಾಂತಿ ಎನ್ನುವ ಹೆಸರನ್ನು 'ಶ್ರೀಕಾಂತ' 'ಸುಮಾ' ಎಂದು ಬದಲಾಯಿಸಿದ. ಈಗ ಶಾಂತ ಸುಮಶ್ರೀಕಾಂತಳಾದಳು. ಹೀಗೆ ತನ್ನ ಹೆಸರು ಬದಲಾವಣೆ ಮಾಡಿದ್ದು ಶಾಂತಿಗೆ ಇಷ್ಟವಿಲ್ಲದಿದ್ದರೂ ಶ್ರೀಕಾಂತನ ಬಲವಂತಕ್ಕೆ ಒಪ್ಪಿಕೊಳ್ಳುತ್ತಾಳೆ. ಇಲ್ಲಿ ಶ್ರೀಕಾಂತನ ಸ್ವಾರ್ಥ ಮನೋಭಾವವನ್ನು ಕಾಣಬಹುದು.

"ನಿನ್ನ ಹಳೆಯದನ್ನೆಲ್ಲ ಬದಲಾಯಿಸಬೇಕೆಂಬಾಸೆ ನನಗೆ ನಿನ್ನ ಹೆಸರು ನಿನ್ನ ನಡೆ ನುಡಿ ನಿನ್ನ ಜೀವನ ಶೈಲಿ ಮೊದಲಾದವುಗಳೆಲ್ಲಾ.. ನೀನೀಗ ನನ್ನ ಹೊಸ ಹೆಣ್ತಿ ಎಲ್ಲ ರೀತಿಯಿಂದ ಹೊಸಬಳೇ ಆಗ್ಬೇಕು" (ಪು. ೪೬೦) ಎನ್ನುತ್ತಾನೆ. ಈ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣಿನ ಅಸ್ತಿತ್ವ ಇರುವುದೇ ಗಂಡಿನಿಂದಲೇ ಎನ್ನುತ್ತಾರೆ. ಅದೇ ಸ್ವಾರ್ಥದಿಂದ ಶಾಂತಿಯೆನ್ನುವ ಹೆಸರನ್ನು ಬದಲಾಯಿಸುತ್ತಾನೆ. ಸಮಾಜದ ಎರಡು ಕಣ್ಣುಗಳಂತಿರುವ ಪುರುಷ ಮತ್ತು ಸ್ತ್ರೀ ಹಿರಿ ಕಿರಿಯಾರಾಗಲು ಹೇಗೆ ಸಾಧ್ಯ. ಬಂಡಿಯ ಎರಡು ಚಕ್ರಗಳು ಒಂದು ಕಿರಿದಾದರೆ, ಇಡೀ ಬಂಡಿಯ ಭಾರ ಆ ಚಕ್ರದ ಮೇಲೆ ಬೀಳುವಂತೆ ನಮ್ಮ ಸಮಾಜ ಹೆಣ್ಣನ್ನು ಕಿರಿಯಳಾಗಿ ಕಾಣುತ್ತಾ ಸಂಸಾರದ ಹೆಚ್ಚಿನ ಬಾರವನ್ನು ಅವಳ ಮೇಲೆ ಹೇರಿದೆ. ಹಾಗೆಯೇ ಶ್ರೀಕಾಂತ ಶಾಂತಿಯನ್ನು ಮದುವೆಯಾದ ಮೇಲೆ ಅವಳ ಬೇಕು ಬೇಡಗಳನ್ನು ಕೇಳದೆ ಯಾವುದೇ ಸಂಸಾರ ಜವಬ್ದಾರಿಯನ್ನು ಹೋರದೆ ಎಲ್ಲಾ ಶಾಂತಿಯ ಮೇಲೇಯೆ ಹಾಕಿರುತ್ತಾನೆ. ಶ್ರೀಕಾಂತ ಶಾಂತಿಯನ್ನು ಕೇವಲ ಲೈಂಗಿಕ ಹಿತಾಸಕ್ತಿಗೋಸ್ಕರ ಮದುವೆಯಾಗಿರುತ್ತಾನೆ. ಶಾಂತಿರವರ "ಹಸಿಮಾಂಸ ಮತ್ತು ಹದ್ದುಗಳು" ಕಾದಂಬರಿಯು 'ಹೆಣ್ಣಿನ ಕೂಗು' ಎನ್ನುವ ಸಿನಿಮಾವಾಗಿ, ಕಲಬುರ್ಗಿಯ ಲಕ್ಷ್ಮೀ ಟಾಕೀಸ್‌ನಲ್ಲಿ ಪ್ರದರ್ಶನವಾಗುತ್ತಿರುವಾಗ ಅದನ್ನು ನೋಡಿದ ಶ್ರೀಕಾಂತ ಒಂದು ದಿನ ಮುಂಜಾನೆಯೇ ಉರಿಯುತ್ತಲೇ ಶಾಂತಿಯ ಮನೆಗೆ ಬಂದವನೇ ಕೆಟ್ಟ ಕೆಟ್ಟ ಬೈಗುಳ ಬೈಯುತ್ತ ಅವಳಿಗೆ ಹೊಡೆಯಲು ಮುಂದಾಗುತ್ತಾನೆ.

"ಹಿಂತಾ ಹಲ್ಕಟ್ ಕಾದಂಬರಿ ಕತಿ ಬರೀತ್ಯಾ... ನಾಚಿಗ್ಗೇಡೀ... ನನ್ನ ಮಾನ ಹರಾಜ ಹಾಕ್ತಾತ್ಯಾ? ಯಾಂವಾ ಅಂವಾ ಈ ಸಿನೇಮಾ ಮಾಡಿದ್ದು? ಅಂವಗೂ ನಿನಗೂ ಏನು ಸಂಬಂಧದಾ? ನಮ್ಮ ಭಾಗದ ಯಾರ ಕಾದಂಬರಿನೂ ಯಾರು ಸಿನೀಮಾ ಮಾಡಿಲ್ಲ ಇಲ್ಲೀತನಕಾ... ನಿಂದೇ ಯಾಕ ಮಾಡದ್ರು? ಅವರಿಗೂ ನಿನಗೂ

ಎಂಥಾ ಕಳ್ಳ ವ್ಯವಹಾರ ಆದಾನೇ ಹಾದರಗಿತ್ತೀ..." (ಪು. ೫೫೦) ಮಹಿಳೆಯರು ಸಮಾಜಕ್ಕೆ ಎಷ್ಟೇ ಕೊಡುಗೆ ಕೊಟ್ಟರೂ ಅವರು ಏನೇ ಸಾಧನೇ ಮಾಡಿದರೂ ಸಮಾಜ ಅವಳನ್ನು ಸಾಧಕಿ ಎಂದು ಬಿಂಬಿಸಿದ್ದರು. ಆದರೆ ಅವಳು ಸಂಸಾರಕ್ಕೆ ಒಬ್ಬ ಸಾಮಾನ್ಯ ಮಹಿಳೆಯಾಗಿಯೇ ತನ್ನ ಗಂಡನಿಂದಲೇ ಚುಚ್ಚು ಮಾತುಗಳನ್ನು ಕೇಳುತ್ತಾಳೆ. ಡೈರಕ್ಟರ್ ಮತ್ತು ಶಾಂತಿಯ ಸಂಬಂಧದ ಬಗ್ಗೆ ಅನುಮಾನ ಹಾಗೂ ವ್ಯಕ್ತಿತ್ವದ ಬಗ್ಗೆಯೇ ಸಂಶಯ ವ್ಯಕ್ತಪಡಿಸುತ್ತಾನೆ. ದೈಹಿಕ ಹಿಂಸೆಯನ್ನು ನೀಡುತ್ತಾನೆ. ಸಿನೀಮಾಕ್ಕೆಂದು ಕೊಟ್ಟ ಹಣವನ್ನು ಕೊಡು ಎಂದು ಅವಳನ್ನು ಬ್ಯಾಂಕಿಗೆ ಕರೆದೊಯ್ದು ಬ್ಯಾಂಕ್‌ನ ಲಾಕರ್‌ನಲ್ಲಿದ್ದ ಎಲ್ಲಾ ಬಂಗಾರದ ಒಡವೆಗಳನ್ನು ತೆಗೆದುಕೊಂಡು ಹೋಗುತ್ತಾನೆ. ಹೀಗೆ ಮಹಿಳೆಯರು ಎಷ್ಟೇ ದೊಡ್ಡ ದೊಡ್ಡ ಸಾಧನೆ ಮಾಡಿದರೂ ಕೂಡ ಅವರನ್ನು ಅಭಿನಂದಿಸುವವರು ಮಾತ್ರ ಕಡಿಮೆ. ಅದರಲ್ಲಿ ಪುರುಷರು ಮಹಿಳೆಯರ ಸಾಧನೆ ಕಂಡು ಮೂಗು ಮುರಿಯುವವರ ಸಂಖ್ಯೆಯೇ ಹೆಚ್ಚಾಗಿರುತ್ತದೆ.

### ೩. 'ಸ್ತ್ರೀ' ಮತ್ತು ಆರ್ಥಿಕ ವ್ಯವಸ್ಥೆ

ಕೆಳವರ್ಗದ ಜನಾಂಗಗಳಲ್ಲಿ ಕುಟುಂಬದ ಎಲ್ಲಾ ಸದಸ್ಯರು ಸೇರಿ ದುಡಿದರೂ ಅದು ಅವರ ಒಂದು ಹೊತ್ತಿನ ಆಹಾರಕ್ಕೂ ಸಾಲುವುದಿಲ್ಲ. ಏಕೆಂದರೆ ಮೇಲ್ವರ್ಗದವರು ಮುಗ್ಧ ಜನರಿಂದ ಹೆಚ್ಚಿಗೆ ಕೆಲಸ ಮಾಡಿಸಿಕೊಂಡು ಕಡಿಮೆ ವೇತನ ಕೊಡುತ್ತಿದ್ದರು. ಆದ್ದರಿಂದ ಈ ಜನರಲ್ಲಿ ಯಾವಾಗಲೂ ಬಡತನ ಅನಕ್ಷರತೆ, ಮೌಢ್ಯತೆಗಳೇ ಹೆಚ್ಚಾಗಿರುತ್ತಿದ್ದವು.

'ಬಾಕಿ' ಕಾದಂಬರಿಯಲ್ಲಿ ಬರುವ ಶಾಂತಿಯ ಕುಟುಂಬ ಯಾವಾಗಲೂ ಬಡತನದ ಬೇಗೆಯಲ್ಲಿ ಬೇಯುತ್ತಿರುತ್ತದೆ. ಶಾಂತಿಯ ತಂದೆ 'ಬಟ್ಟೆ ಗಿರಣಿಯಲ್ಲಿ ಕೂಲಿ ಕೆಲಸ ಮಾಡುತ್ತಿರುತ್ತಾನೆ. ಅದರಿಂದ ಬರುವ ಆದಾಯ ಅವನ ಮನೆಯ ಸಂಸಾರ ನಡೆಸಲು ಸಾಧ್ಯವಾಗುತ್ತಿರಲಿಲ್ಲ. ಅದರಲ್ಲಿ ಮಕ್ಕಳು ಆದ ಮೇಲಂತೂ ಅವರ ಒಂದು ಹೊತ್ತಿನ ಊಟಕ್ಕೂ ಸಹ ಬಹಳ ಕಷ್ಟವಾಗುತ್ತದೆ. ಶರಣಮ್ಮ ಕೆಲಸಕ್ಕೆ ಹೋಗಲು ಮಕ್ಕಳು ಚಿಕ್ಕವರಿರುತ್ತಾರೆ. ಅವರನ್ನು ನೋಡಿಕೊಳ್ಳುವವರು ಯಾರು ಇರುವುದಿಲ್ಲ. ಒಮ್ಮೆ ಶಾಂತಿ ಚಿಕ್ಕವಳಿದ್ದಾಗ ಅವಳಿಗೆ ನೆಗಡಿ ಕೆಮ್ಮು ಜ್ವರ ಅಂತ ಕಾಯಿಲೆ ಶುರುವಾಗುತ್ತದೆ.

ಡಾಕ್ಟರ್, ಪಂಚಾಂಗ, ಗಂಡಾಟ ಔಷಧ, ಬಾಲಗ್ರಹ, ಶನಿಗ್ರಹ, ನಾಗರಹಾವು ಕಾಟ, ಎಂದು ಎಲ್ಲಾ ತೋರಿಸಿದರು. ಆದರೂ ಶಾಂತಿಗೆ ಆರಾಮವಾಗುವುದಿಲ್ಲ. ದಿನದಿಂದ ದಿನಕ್ಕೆ ಕಾಯಿಲೆ ಬಿಗಡಾಯಿಸುತ್ತಲೇ ಹೋಯಿತು. ಆಕೆ "ಎಲುಬಿನ ಹಂದರಕ್ಕೆ ತೊಗಟೆ ಮಾಡಿಸಿದಂಗಾಗಿ ನಿತ್ರಾಣವಾಗತೊಡಗಿದಳು. 'ಶರಣಮ್ಮ ಡಾಕ್ಟರ್

ಬಳಿ ಹೋದಾಗ ಮಗಳಿಗೆ ಬೇಗ ಗುಣವಾಗಲಿ ಎಂದು ಗೋಳಾಡುವುದನ್ನು ಈ ರೀತಿಯಾಗಿ ನೋಡಬಹುದು.

"ಯಪ್ಪಾ ಡಾಕದರ ಸಾಬ್ರೇ... ನನ್‌ಕೂಸಿಗಿ ಆರಾಮ್ ಮಾಡ್ರಿ ಬಾಬಾ.. ನಿಮ್ ಕಾಲಿಗಿ ಬೀಳ್ತೀನ್ರೀ... ಅಂತಂದು ಶರಣಮ್ಮ ಕೈ ಜೋಡಿಸಿ ಅಳತೊಡಗಿದಳು.(ಪು. ೬೭) ಎಲ್ಲಿ ತೋರಿಸಿದರೂ ಶಾಂತಿ ಆರಾಮವಾಗುವುದಿಲ್ಲ. ಶಾಂತಪ್ಪ ಮಗಳಿಗೆ ದವಖಾನೆಗೆ ಹೋಗಲು ಮನೆಯಲ್ಲಿರುವ ಬಂಗಾರ, ಬೆಳ್ಳಿರುಳಿ, ಕಡಗಗಳೂ, ಸರಗಳು ಎಲ್ಲವೂ ಅಂಗಡಿ ಸೇರಿದವು. ಒಪ್ಪತ್ತಿನ ಕೂಳಿಗೂ ಪರದಾಡಬೇಕಾದ ಕೆಟ್ಟ ದಿನಗಳು ಬಂದವು. ದೋಸ್ತರ ಹತ್ತಿರ ಸಾಲವನ್ನು ಮಾಡಿದ್ದ ಶಾಂತಪ್ಪನ ಸಂಬಳ ಸಾಲಕ್ಕೆ ಬಡ್ಡಿ ಕಟ್ಟಲು ಅವನ ಖರ್ಚಿಗೆ ಸರಿಹೋಗುತ್ತಿತ್ತು.

ಒಮ್ಮೆ ಶಾಂತಪ್ಪ "ಎಂದ ಆರಾಮಾಗ್ತದೋ ಏನೊ... ದೇವರಾ, ದಿಂಡರಾ, ದೆವ್ವಭೂತಾ, ಹಕೀಮ ಡಾಕದರ ಅಂತೆಯೆಲ್ಲಾ ಆಯ್ತು, ಖರೇ ಏಳ್ಳೋಟು ಪಾಯದಾ ಆಗಲಿಲ್ಲ. ಎಲ್ಲಿ ಶಾಂತಿ ನಮ್ ಕೈ ತಪ್ಪಿ ಹೋಗ್ತಾಳೋ ಅಂತ ಅನಸಲಕತ್ತದಾ ಎಂದನು. ಇದಕ್ಕೆ ತಾಯಿಯಾದ ಶರಣಮ್ಮ "ಥೂ ಬಿಟ್ಟು ಅನ್ನು.. ಹಂತಾ ಅಪಶಕುನದ ಮಾತಾಡ ಬ್ಯಾಡೋ ನನ್ ಮಗಳಿಗಿ ನನ್ನ ಆಯಸ್ಸು ಕೊಟ್ಟಾದ್ರೂ ನಾ ಆಕೀಗಿ ಉಳಸ್ಗೋತ್ತೀನಿ ಹಿಂಗೆಲ್ಲಾ ಅಂದು ನನ್ನ ಕಳ್ಳಾಗ ಕತ್ತರಿ ಆಡಸಬ್ಯಾಡೋ ಮಾರಾಯಾ ಅಂತ ಶರಣಮ್ಮ ಕಣ್ಣೀರು ತರುತ್ತಾಳೆ" (ಪು. ೭೫) ಶಾಂತಪ್ಪ ಮಗಳ ಕಾಯಿಲೆಗೆ ಎಲ್ಲಾ ಕಡೆ ಚಿಕಿತ್ಸೆ ಕೊಡಿಸಿದರು. ಗುಣಮುಖವಾಗಲಿಲ್ಲ. ಅದನ್ನು ಕಂಡ ಶಾಂತಪ್ಪ ನಮ್ಮ ಮಗಳು ಮರಣಕ್ಕೆ ಹತ್ತಿರವಾಗುತ್ತಿದ್ದಾಳೆ ಎಂದಾಗ ಶರಣಮ್ಮನ ಕರುಳ ಬಳ್ಳಿ ಕತ್ತರಿಸಿದಂತಹ ಅನುಭವವಾಗಿರುವುದನ್ನು ನೋಡಬಹುದು. ಶಾಂತಿಗೆ ಪಟ್ಟಣದಲ್ಲಿ ಚಿಕಿತ್ಸೆ ಕೊಡಿಸಲು ಹಣದ ಕೊರತೆ ಇರುತ್ತದೆ ಅದರಲ್ಲಿಯೂ ತಾಯಿ ದೇವರೆ ನನ್ನ ಜೀವವನ್ನು ತೆಗೆದುಕೊಂಡು ಮಗಳ ಜೀವವನ್ನು ಉಳಿಸಿಕೊಡು ಎಂದು ದೇವರಲ್ಲಿ ಮೊರೆ ಇಡುವುದನ್ನು ಕಾಣಬಹುದಾಗಿದೆ.

ಶರಣಮ್ಮ ತೋಟದಲ್ಲಿ ಕೆಲಸಕ್ಕೆ ಹೋಗುತ್ತಿರುತ್ತಾಳೆ. ಒಮ್ಮೆ ಅವಳ ಅಣ್ಣನಾದ ತಿಪ್ಪಣ್ಣ ಇದ್ದಕಿದ್ದ ಹಾಗೇ ತಂಗಿಯ ಮನೆಗೆ ಬರುತ್ತಾನೆ. ಶರಣಮ್ಮ ಮನೆಯಲ್ಲಿ ಅಣ್ಣನಿಗೆ ರೊಟ್ಟಿ ಮಾಡಿಕೊಡಲು ಜೋಳದ ಹಿಟ್ಟು ಸಹ ಇರುವುದಿಲ್ಲ. ಅವಳು, ಬೇರೆ ಮನೆಯಿಂದ ಜೋಳದ ಹಿಟ್ಟನ್ನು ಕಡವಾಗಿ ತೆಗೆದುಕೊಂಡು ಬಂದು ರೊಟ್ಟಿ ಮಾಡಿಕೊಡುತ್ತಾಳೆ. ಇದನ್ನು ಗಮನಿಸಿದ ತಿಪ್ಪಣ್ಣ ಮರುದಿನ ಬಂಡಿಯಲ್ಲಿ ಒಂದು ಚೀಲ ಜೋಳ, ನಾಕಮಣ, ಕರಿಕವಳಿ, ಅಕ್ಕಿ, ನಾಕು ಸೇರು ಬೇಳೇ, ಎರಡು ಮಣ

ಜವಿಗೋಧಿಯ ಚೀಲಗಳನ್ನು ತಂದು ತಂಗಿಯ ಮನೆಯಲ್ಲಿಟ್ಟನು ಇದನ್ನು ಕಂಡ ಶರಣಮ್ಮ "ಕಣ್ಣುಗಳಲ್ಲಿ ನೀರು ದಟ್ಟೈಸಿದುವು, ಸ್ವಾಭಿಮಾನಿ ಶರಣಮ್ಮ ತನ್ನ ಸಂಸಾರದ ಬಡತನವನ್ನು ತವರಿನವರ ಮುಂದೆ ಎಂದು ಹೇಳಿಕೊಂಡಿರಲಿಲ್ಲ. ಬಡತನಕ್ಕೂ ಒಂದು ಘನತೆ ಗೌರವ ಇರುತ್ತದೆ. ಅದನ್ನು ಯಾರ ಬಳಿಯು ಹೇಳಿಕೊಳ್ಳಬಾರದು ಎಂಬ ವಿಷಯ ಆ ಹಳ್ಳಿಯ ಹೆಣ್ಣು ಮಗಳಿಗೆ ಗೊತ್ತಿತ್ತು. ಆದ್ದರಿಂದಲೇ ಅವಳು ತನ್ನ ಬಡತನವನ್ನು ತೋರಿಸಿಕೊಳ್ಳುತ್ತಿರಲಿಲ್ಲ. ಸ್ವತಃ ತಾನೇ ದುಡಿಯುವುದಕ್ಕೆ ಮುಂದಾಗುತ್ತಾಳೆ. ಅಣ್ಣ ತಂದುಕೊಟ್ಟನಲ್ಲ ಎಂದು ಖುಷಿಯಾಗದೇ, "ಯಣ್ಣಾ... ಇದೆಲ್ಲಾ ಯಾಕ್ ತರಾಕ ಹೋಗಿದ್ದೆಪ್ಪ? ದಾ ತಾರೀಕು ನಿನ್ ಬಾವನ ಗಿರಣಿ ಪಗಾರ ಬರ್ತಾದಲ್ಲ, ಅಂದ ಜ್ವಾಳ ತರ್ಬೇಕಂತ ಮಾಡಿದ್ದೇವು... ನೀ ಸುಮ್ನೇ, ತರಾಸ ತಗೊಂಡಿ ನೋಡು" (ಪು.೯೬) ಅಣ್ಣಾ ಎಂದು ಶರಣಮ್ಮ ತನ್ನ ಬಡತನದಲ್ಲಿಯೇ ಸ್ವಾಭಿಮಾನವನ್ನು ಮೆರೆಯುತ್ತಾಳೆ.

ಶಾಂತಪ್ಪ ತಾವು ಮಗಳಿಗಾಗಿ ಮಾಡಿದ ಸಾಲ ತೀರಿಸಲು ಹಗಲು ರಾತ್ರಿ ದುಡಿಯುತ್ತಿರುತ್ತಾನೆ. ಮೈಯಲಿ ಹುಷಾರ ಇಲ್ಲಿದಿದ್ದರೂ ಗಿರಣಿಯ ಕೆಲಸಕ್ಕೆ ತಪ್ಪಿಸದೇ ಹೋಗುತ್ತಿದ್ದ ಜೀವ ಗಟ್ಟಿಮಾಡಿಕೊಂಡು ದುಡಿಯುತ್ತಿದ್ದ ಆಗಾಗ ಓವರ್ ಟೈಮ್ ಅಂತ ಹಗಲು ಪಾಳಿ ಮತ್ತು ರಾತ್ರಿ ಪಾಳಿಯನ್ನು ಕೆಲಸ ಮಾಡುತ್ತಿದ್ದ ಒಂದು ದಿನ ಶರಣಮ್ಮ...

"ಹಿಂಗ್ ದನಾ ದುಡದಂಗ ಹಗಲಾ ರಾತರಿ ದುಡುಸು ನಾಳ ನಿನಗ ಬ್ಯಾನಿ ಬ್ಯಾಸರಕಿ ಬಂದರ ನೀ ದುಡಿದದ್ದೆಲ್ಲಾ ದವಾಖಾನಿಗಿ ಹಾಕ್ಬೇಕಾಗ್ತದೋ ಮಾರಾಯ... ಮದಲ ನಿನ್ನ ಮೈ ಮಿಜಾಜ(ಆರೋಗ್ಯ) ನೋಡ್ಕೋ... ನೀ ಗಟ್ಟಿದ್ದರೆ ನಾವೆಲ್ಲಾ ಗಟ್ಟಿರಾದು"(ಪು.೧೦೦)ಎಂದು ಹೇಳುತ್ತಾಳೆ.

ತಮ್ಮ ಮನೆಯ ಬಡತನವನ್ನು ನೋಡಲಾರದೆ ಗಂಡ ಹಗಲು ರಾತ್ರಿ ಗಿರಣಿಯಲ್ಲಿ ದುಡಿಯುವುದನ್ನು ನೋಡಿ, ಗಂಡನಿಗೆ ಏನಾದರೂ ಹೆಚ್ಚು ಕಡಿಮೆಯಾದರೆ ನಮಗೇ ಯಾರು ದಿಕ್ಕು ಎಂದು ತನ್ನ ಬಡತನವನ್ನು ನೆನಸಿಕೊಂಡು ಅಳುತ್ತಾಳೆ. ಶಾಂತಪ್ಪ ಶರಣಮ್ಮಳಿಗೆ ಒಂದರ ಹಿಂದೆ ಒಂದರಂತೆ ಕಷ್ಟಗಳು ಬರುತ್ತಲೆ ಇರುತ್ತವೆ. ಒಂದು ದಿನ ಶಾಂತಪ್ಪ ರಾತ್ರಿ ಮಲಗಿರುವಾಗ ಹೆಗ್ಗಣದ ಮರಿಯೊಂದು ಅವನ ಹಣೆಗೆ ಕಚ್ಚುತ್ತದೆ. ಅದೇ ರಾತ್ರಿ ಶರಣಮ್ಮನಿಗೆ ಕೆಂಪು ಚೇಳು ಕಡಿಯುತ್ತದೆ.

ಇದರಿಂದ ಅವರಿಬ್ಬರೂ ನೋವು ಸಂಕಟವನ್ನು ಅನುಭವಿಸುತ್ತಾರೆ. ಶರಣಮ್ಮ "ಇದು ಎಂಥಾ ಶನಿಕಾಟನೋ ಶಿವನೇ... ಮತ್ರ್ಯಾದಾಗಿನ ಎಲ್ಲಾ ದೇವರೇ ಯಾರಿಗೇನು

ಕೆಟ್ಟದು ಮಾಡಿದ್ದೆವಂತ ನಮಗ್ಹಿಂತಾ ಶಿಗಸ್ಯಾ ಕುಡ್ಲಕತ್ತಿದ್ರೋ ಪರಮಾತುಮಾ... ತುಳಾಜಪುರ ಅಂಬಾಬಾಯೀ... ಸಾವಳಿಗಿ ಶಿವಲಿಂಗೇಸೂರಾ... ನೀವೆಲ್ಲಾ ಕಣ್ಣ ಮುಚಗೊಂಡು ಕುಂತೀರೆನ್ರೋ ಯಪ್ಪಾ... ನಮ್ಮ ತರಾಸ ನಿಮಗ ಕಾಣ್ಯಂಗಿಲ್ಲಾಗ್ಯಾದೇನ್ರೋ ಶಿವನೇ... ಇನ್ನಾ ನನ್ ಕೈಲೆ ಇದೆಲ್ಲಾ ತಾಳ್ಕೊಮಾದು ಆಗಂಗಿಲ್ಲಪೋ.. ನನಗ ಸಾವು ಕುಡ್ರೀ... ಎಂದು ತನ್ನ ನೋವು, ಬಡತನ, ದುಃಖ ಎಲ್ಲವನ್ನು ನೆನೆಸಿಕೊಂಡು ಅಳುತ್ತಾಳೆ ನನಗೆ ಸಾವು ಕೊಡಪ್ಪ ದೇವರೆ ಎಂದು ದೇವರಲ್ಲಿ ಮೊರೆ ಇಡುತ್ತಾಳೆ." (ಪು.೧೦೫)

ಶಾಂತಿ ಶಾಲೆಗೆ ಹೋಗುವಾಗ ಅವಳಿಗೆ ಒಂದು ಜೊತೆ ಒಳ್ಳೆಯ ಬಟ್ಟೆ ಇರುವುದಿಲ್ಲ. ಬೇಸಿಗೆಯ ದಿನಗಳಲ್ಲಿ ಶಾಲೆ ಶುರುವಾಗಿದ್ದರಿಂದ ಶಾಂತಿ ಶಾಲೆಗೆ ಹೋಗುವಾಗ, ಬರುವಾಗ, ಕಲಬುರ್ಗಿಯ ಬಿಸಿಲು ಚಪ್ಪಲಿ ಇಲ್ಲದೆ ಶಾಂತಿಯ ಕಾಲುಗಳಿಗೆ ಗೊಬ್ಬೆ ಬರುತ್ತಿದ್ದವು "ನನಗೆಡ್ಡು ಚಪ್ಪಲಿ ಈಸುಕುಡು ಬಾಬಾ... ಬಿಸಿಲಾಗ ಬರೇಗಾಲಿಲೇ ನಡ್ದು ಅಂಗಾಲಿಗಿ ಗುಳ್ಳಿ ಬಂದು ಉರೀಕತ್ತಾದ ಇಗಾ ನೋಡು" (ಪು. ೧೩೬) ಎಂದು ಶಾಂತಿ ತನ್ನ ಅಂಗಾಲುಗಳನ್ನು ತೋರಿಸಿದಾಗ ಅದನ್ನು ಕಂಡ ಶರಣಮ್ಮಗೆ ಕರಳು ಚುರ‍್ರಂದಿತು. ಮಗಳಿಗೆ ಒಂದು ಜೊತೆ ಚಪ್ಪಲಿ ಕೂಡ ತರಲಾಗದೆ ತನ್ನ ಬಡತನದ ಬಗ್ಗೆ ಸಿಟ್ಟುಬರುತ್ತದೆ. ಶರಣಮ್ಮಳಿಗೆ ಎಷ್ಟು ಸಿಟ್ಟು ಬಂದರೆನಂತೆ ಬಡವನ ಸಿಟ್ಟು ದವಡೆಗೆ ಮೂಲ ಎನ್ನುವ ಹಾಗೇ ಆಗುತ್ತದೆ. ಆ ಎಲ್ಲಾ ಸಿಟ್ಟನ್ನು ಶಾಂತಿಯ ಮೇಲೆ ತೋರಿಸುತ್ತಾಳೆ. "ಅದಕ್ಕೆ ಬಡ್ಕೋತಿನಿ ನಾ... ನೀ ಈಟೆಲ್ಲಾ ಹೈರಾಣಾಗಿ ಸಾಲಿಗಿ ಹೋಗಾದು ಬ್ಯಾಡಂತ... ಅಪ್ಪ ಮಗಳು ನನ್ ಮಾತೆಲ್ಲಿ ಕೇಳ್ತೀರಿ? ಈಗ ಅನುಭವಿಸು, ಬಿಸಲಾಗ ಅಂಗಾಲು, ಅಳ್ಕತ್ತಿ ಸುಟಗೊಂಡು ಸಾಯಿ" (ಪು. ೧೩೭) ಎಂದು ಶರಣಮ್ಮ ತನ್ನ ಸಿಟ್ಟನ್ನೆಲ್ಲಾ ಶಾಂತಿಯ ಮೇಲೆ ಹಾಕುತ್ತಾಳೆ. ಶಾಂತಿಗೆ ಬರೆಯಲು ಬೇರೆ ಹುಡುಗರು ಬರೆದು ಬಿಟ್ಟಿರುವ ಹಳೇ ಪುಸ್ತಕಗಳ ಉಳಿದ ಹಾಳೆಗಳನ್ನು ಹರಿದು ಅವುಗಳನ್ನು ಶಾಂತಪ್ಪ ಹೊಲಿದು ಕೊಡುತ್ತಿದ್ದ ಅವುಗಳೇ ಅವಳಿಗೆ ನೋಟ್ ಪುಸ್ತಕಗಳಾಗಿರುತ್ತಿದ್ದವು. ತನ್ನ ಮನೆಯ ಬಡತನವನ್ನು ನೋಡಲಾರದೇ ಶಾಂತಿ ಎಸ್.ಎಸ್.ಎಲ್.ಸಿ. ಮುಗಿದ ನಂತರ ಜಿಲ್ಲಾಧಿಕಾರಿ ಕಛೇರಿಯಲ್ಲಿ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ.

"ಶಾಂತಿ ಶ್ರೀಕಾಂತನನ್ನು ಮದುವೆಯಾಗಿರುತ್ತಾಳೆ. ಅವನ ಆಸ್ತಿಯಲ್ಲಿ ಶಾಂತಿಯ ಮಕ್ಕಳಿಗೂ ಪಾಲು ಸಿಗಬೇಕಾಗಿರುತ್ತದೆ. ಆದರೆ ಶ್ರೀಕಾಂತ ಕಲಬುರ್ಗಿಯ ಬಜಾರಿನಲ್ಲಿರುವ ಅಂಗಡಿಗಳಿಗೆ ಬೆಂಕಿ ಬಿದ್ದಿರುತ್ತದೆ. ಅದರ ಪರಿಹಾರ ನಿಧಿಯನ್ನು ಶ್ರೀಕಾಂತ ಮತ್ತು ಇತರ ಮೇಲಾಧಿಕಾರಿಗಳು ಭ್ರಷ್ಟಾಚಾರದಲ್ಲಿ ಭಾಗಿಯಾಗಿದ್ದಾರೆಂದು ಶ್ರೀಕಾಂತನನ್ನು

ಜೈಲಿಗೆ ಕರೆದುಕೊಂಡು ಹೋಗಿರುತ್ತಾರೆ. ಅವನನ್ನು ಜಾಮೀನಿನ ಮೇಲೆ ಹೊರಗಡೆ ಕರೆ ತರಲು ಅವನ ಆಸ್ತಿಯನ್ನು ಒತ್ತೆಯಿಟ್ಟು ಬಿಡಿಸಿಕೊಳ್ಳುತ್ತಾಳೆ. ಮೊದಲ ಹೆಂಡ್ತಿ, ಮಾಯಾ, ಇದನ್ನು ತಿಳಿದ ಶಾಂತಿ "ಈ ಶ್ರೀಕಾಂತ ನನ್ನನ್ನೂ, ಮಕ್ಕಳನ್ನೂ ಕೊನೆಗೆ ಕೊಂದೆ, ಬಿಟ್ಟನಲ್ಲ, ಹಾಸಿ ಉಂಡು ಬೀಸಿ ಒಗೆದ ಬಾಳೆಲೆಯಂಗ ನನಗ ಬಳಸಿಕೊಂಡು ನನಗೂ ನನ್ನ ಮಕ್ಕಳಿಗೂ ತಲೆಮ್ಯಾಲೆ ಚಪ್ಪಡಿ ಕಲ್ಲೆಳೆದು ಬಿಟ್ಟನಲ್ಲ... ಇವನಿಗೆ ಹುಟ್ಟಿದ ಮಕ್ಕಳಿಗೇ ತನ್ನ ಒಂದಿಂಚು ಜಮೀನು ಕೊಡಲಾರ್ದೆ ದೋಕಾ ಮಾಡಿದನಲ್ಲ... ಖಾಸಾ ತನ್ನ ಕಂದಮ್ಮಗೊಳಿಗೇ ಹಿಂಗ್ ಮೋಸ ಮಾಡ್ಲಿಕ್ಕ ಇವನಿಗಿ ಮನಸ್ಸಾದ್ರೂ ಹ್ಯಾಂಗ ಬಂತೊ?" (ಪು.೫೧೮) ಎಂದು ಶ್ರೀಕಾಂತನನ್ನು ಬೈಯುತ್ತಾ ಶಾಂತಿ ತನ್ನ ನೋವನ್ನು ಹೇಳಿಕೊಳ್ಳುತ್ತಾಳೆ. ಮಹಿಳೆಯರಿಗೆ ಜೀವನದಲ್ಲಿ ಮುಖ್ಯವಾಗಿ ಭದ್ರತೆ ಬೇಕಾಗಿರುತ್ತದೆ. ಅದಕ್ಕಾಗಿಯೇ ತಂದೆ-ತಾಯಿ ಮಕ್ಕಳಿಗೆ ಮದುವೆ ಮಾಡುವಾಗ ಗಂಡನ ಕಡೆಯವರ ಆಸ್ತಿಪಾಸ್ತಿ ಮತ್ತು ಹುಡುಗನ ಗಳಿಕೆಯನ್ನು ನೋಡಿ ವಿಚಾರ ಮಾಡಿ ಮದುವೆಯ ಮಾತುಕತೆ ಮಾಡುತ್ತಾರೆ. ಏಕೆಂದರೆ ಮುಂದೆ ಅವರ ಮಕ್ಕಳಿಗೆ ಮತ್ತು ಮೊಮ್ಮಕ್ಕಳಿಗೆ ಅದು ಭದ್ರತೆಯಾಗಿರಲೆಂದು, ಆದರೆ ಶಾಂತಿ ಇದು ಯಾವುದನ್ನು ತಿಳಿಯದೇ ಅವನ ಮೋಸ ಜಾಲಕ್ಕೆ ಬೀಳುತ್ತಾಳೆ. ಶ್ರೀಕಾಂತನ ಮೊದಲ ಹೆಂಡತಿ ಆಸ್ತಿಯನ್ನೆಲ್ಲಾ ತನ್ನ ಮತ್ತು ತನ್ನ ಮಕ್ಕಳ ಹೆಸರಿಗೆ ಮಾಡಿಕೊಂಡು ಶಾಂತಿಗೆ ಅನ್ಯಾಯ ಮಾಡುತ್ತಾಳೆ. ಈ ರೀತಿಯಾಗಿ ಶಾಂತಿ ಬಾಲ್ಯದಿಂದಲೂ ಬಡತನದ ಬೆಂಕಿಯಲ್ಲಿ ಬೆಂದ ಬಂಗಾರವಾಗಿ ಹೊರಹೊಮ್ಮುತ್ತಾಳೆ.

**೪. ಧಾರ್ಮಿಕ ಆಚರಣೆಗಳಲ್ಲಿ ಮಹಿಳೆ**

ಧಾರ್ಮಿಕ ಆಚರಣೆಗಳಲ್ಲಿ ಮಹಿಳೆಯರನ್ನು ಮೇಲ್ವರ್ಗದ ಜನರು ಮತ್ತು ಕೆಳವರ್ಗದವರ ಮೂಢನಂಬಿಕೆಯ ಜನರು ಸೇರಿ ಶೋಷಣೆಗೊಳಪಡಿಸುತ್ತಾರೆ. ಕೆಳವರ್ಗದ ಮಹಿಳೆಯರು ಮಾಪುರ ತಾಯಿಯ ಜಾತ್ರೆಯಲ್ಲಿ ಮೈಮೇಲೆ ಪ್ರಜ್ಞೆಯಿಲ್ಲದೆ ನೀಚಾ ಬೆತ್ತಲಾಗಿ ನೆತ್ತಿಯ ಮೇಲೆ ಸೊಡ್ಡಾರತಿ ಹೊತ್ತು ಬಾಯಲ್ಲಿ ಬೇವಿನ ಗೊಲ್ಲೆ ಕಚ್ಚಿ ಹಿಡಿದು ಮೃಗಗಳಂತೆ ಗಂಡು, ಹೆಣ್ಣುಗಳು ಓಡು ನಡುಗೆಯಲ್ಲಿ ದೇವಿಯ ಗುಡಿ ಸುತ್ತುತ್ತಾರೆ. ಇಂತಹ ಆಚರಣೆಗಳನ್ನು ಕಂಡ ಶಾಂತಿಗೆ ಮೈ ಝುಂ ಅನ್ನುತ್ತಿತ್ತು. ಆ ದೃಶ್ಯ ನೋಡಿದವಳಿಗೆ ಅಂತಹ ಬೇಸಿಗೆಯ ಬಿಸಿಲಲ್ಲೂ ಮೈಗೆ ಚಳಿ ಬಂದವರಂತೆ ನಡುಗುತ್ತಿದ್ದಳು.

ಮಾಪುರ ತಾಯಿಯೆಂದರೆ ಅದು ಕಪ್ಪು ಮಂದಿಯ ಆರಾಧ್ಯ ದೇವತೆ ಈ ದೇವತೆಗೆ ಕೆಳವರ್ಗದ ಹೆಣ್ಣು ಮಕ್ಕಳನ್ನು ಜೋಗಣಿಯಾಗಿ ಬಿಡುವುದು. ಬೆತ್ತಲೆ ಸೇವೆ

ಮಾಡುವುದು. ಇವು ಆ ದೇವರಿಗೆ ತೀರಿಸುವ ಹರಕೆಗಳಾಗಿದ್ದವು. ಇಂತಹ ಹರಕೆಗಳು ತೀರಿಸುವುದು ಕೇವಲ ದಲಿತ ಮಹಿಳೆಯರು ಮಾತ್ರ ಹರೆಯದ ಹೆಣ್ಣುಮಕ್ಕಳನ್ನು ಜೋಗಣಿಯಾಗಿ ಬಿಡುತ್ತಾರೆ. ಅವಳು ಜೀವನಪೂರ್ತಿ ಬೇರೆ ಬೇರೆ ಗಂಡಸರಿಗೆ ತನ್ನ ದೇಹವನ್ನು ಹಂಚಿಕೊಂಡು ಜೀವನ ನಡೆಸಬೇಕಾಗುತ್ತದೆ. ಇಂತಹ ದೃಶ್ಯಗಳನ್ನು ಕಂಡ ಶಾಂತಿಯ ಅಂತರಂಗದಲ್ಲಿ ಹಲವಾರು ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ, ಅನುಮಾನಗಳು, ಹೆದರಿಕೆಗಳು, ಹಿಂಜರಿಕೆಗಳು, ಆಶ್ಚರ್ಯಗಳು ಮೂಡುತ್ತವೆ. ಶಾಂತಿಯ ಎಳೆ ಮನಸ್ಸಿನ ಮೇಲೆ ಇಂತಹ ಘಟನೆಗಳು ಮಾಸದ ಗಾಯದ ಹಾಗೆ ಇರುತ್ತವೆ. ಶಾಂತಿ ತನ್ನ ಅಜ್ಜಿಗೆ ಈ ರೀತಿಯಾಗಿ ಪ್ರಶ್ನೆ ಮಾಡುತ್ತಾಳೆ.

"ಆಯೀ... ಅವರ‍್ಯಾಕ ಬತ್ತಲೆಯಾಗಿ ಗುಡಿ ಸುತ್ತುತ್ತಾರೇ? ಸಾವಿರಾರು ಮಂದಿ ನೆರೆದಿರೋ ಜಾತ್ರ್ಯಾಗ ಹಂಗ ತಿರುಗೋದಂದ್ರ ಅವ್ರೀಗಿ ನಾಚಿಕಿ ಬರಂಗಿಲ್ಲೇನು? ಹಂತವ್ರೀಗಿ ನೋಡದ್ರ ನನಗ ಅಂಜಕಿ ಬರ‍್ತಾದವ್ವ..."(ಪು. ೧೮೮) ಎಳೆ ಮನಸ್ಸಿನ ಶಾಂತಿ ತನ್ನ ಅಜ್ಜಿ ಲಚ್ಚವ್ವಗೆ ಪ್ರಶ್ನೆ ಕೇಳುತ್ತಾಳೆ. ಇದರಿಂದ ಎಳೆ ಮನಸ್ಸಿನ ಮೇಲೆ ಇಂತಹ ಆಚರಣೆಗಳು ಎಷ್ಟು ಪರಿಣಾಮ ಬೀರಿವೆ ಎಂದು ಗಮನಿಸಬಹುದು. ಹೊಲ ಮಾದರ ಮಂದಿ ಮಾಪುರದೇವಿ ಜಾತ್ರೆಯಲ್ಲಿ ಬೆತ್ತಲೆಸೇವೆ ಮಾಡುತ್ತೇನೆ ಎಂದು ಹರಿಸಿಕೊಂಡಿರುತ್ತಾರೆ. ಎಂದು ಶಾಂತಿಯ ಅಜ್ಜಿ ಲಚ್ಚವ್ವ ಹೇಳಿದರೆ. ಅದಕ್ಕೆ ಪ್ರತಿಯಾಗಿ ಶಾಂತಿ ಹೊಲ ಮಾದರ ಮಂದಿಯೇ ಏಕೆ ಇಂತಹ ಹರಕೆಗಳನ್ನು ಹೋರುತ್ತಾರೆ. ಎಂದು ಕೇಳುವಲ್ಲಿ ಬದಲಾವಣೆಯ ಮನಸ್ಥಿತಿಗಳನ್ನು ಕಾದಂಬರಿಕಾರರು ವಿವರಿಸಿದ್ದಾರೆ.

"ಹಂತಾ ಹರಕಿ ಯಾಕಾದ್ರೂ ಹೊರ‍್ತಾರೋ ಕೋಡಿ..."(ಪು. ೧೮೯) ಶಾಂತಿ ಮನಸ್ಸಿನಲ್ಲಿ ಜಾತ್ರೆಯಲ್ಲಿ ನಡೆದ ಘಟನಾವಳಿಗಳ ಬಗ್ಗೆ ಅಚ್ಚಳಿಯದೆ ಮೂಡಿರುತ್ತವೆ. ಈ ವಿಷಯಗಳು ಶಾಂತಿಯ ತಲೆಯಲ್ಲಿ ಗೂಂಗಿ ಹುಳ ಕೊರೆದಂತೆ ಕೊರೆದು ತೊಡಗಿರುತ್ತದೆ. ಕೆಳವರ್ಗದ ಮಹಿಳೆಯರು ಅನುಭವಿಸುತ್ತಿರುವ ನೋವುಗಳನ್ನು, ಶೋಷಣೆಗಳನ್ನು ಮಟ್ಟ ಹಾಕಬೇಕು ಎನ್ನುವ ಮನಸ್ಥಿತಿಯನ್ನು ಹೊಂದುತ್ತಾಳೆ. ಶಾಂತಿಯ ಬಾಲ್ಯದಲ್ಲಿ ನಡೆದ ಇಂತಹ ಘಟನೆಗಳೇ ಅವಳ ಮುಂದೆ ಒಬ್ಬ ದಲಿತ ಬಂಡಾಯ ಲೇಖಕಿಯಾಗಿ ಹೊರ ಹೊಮ್ಮಲು ಸಾಧ್ಯವಾಗುತ್ತದೆ.

ಶಾಂತಿ ಮೈನೆರೆದಿರುತ್ತಾಳೆ, ಅವಳನ್ನು ಹನ್ನೊಂದು ದಿವಸ ಮನೆಯಲ್ಲಿ ಇರಿಸಿ ಒಂದು ದಿನ ಅವಳಿಗೆ ಹೂ ಮುಡಿಸಿ ರೀತಿ ರಿವಾಜುಗಳನ್ನು ಮಾಡಿದರು, ಮಾರನೆಯ ದಿನ ಅವಳು ಶಾಲೆಗೆ ಹೋಗಲು ತಯಾರಾದಳು. ಅವಳು ಮೊದಲು ತೊಡುತ್ತಿದ್ದ

'ಪರಕಾರ, ಜಾಕೀಟು ಊಟ್ಗೊಂಡು ಸಾಲಿಗೆ ಹೋಗಾದು ಬ್ಯಾಡ. ಈ ಒಂಬತ್ತು ವಾರಿನ ಸೀರಿ ಉಟಗೊಂಡು ನೆತ್ತಿಮ್ಯಾಲ ಅಕಾಡಿ ಇಕಾಡಿ ಸೆರಗ ಹೊಚ್ಕೊಂಡು ಹೋಗ್ಬೇಕು ನೋಡು ರಸ್ತಾದ ಮ್ಯಾಲ ಆಕಾಡಿ ಇಕಾಡಿ ನೋಡ್ಕೋತ ಹಲ್ಲುಕಿಸಗೋತ ಗೆಳೇತರ ಜೋಡಿ ಹರಟಿ ಹೊಡ್ಕೋತ ಹೋಗಬ್ಯಾಡ ಏನು? ದೊಡ್ಡಕಿ ಆಗಿದ್ದೀಗ ನೀನು... ಗಂಬೀರಾಗಿರ್ಬೇಕು..." (ಪು. ೨೨೨) ಎಂದು ಶರಣಮ್ಮ ತನ್ನ ಮಗಳು ಶಾಂತಿಗೆ ಹೇಳುತ್ತಾಳೆ. ಆದರೆ ಶಾಂತಿ ಇದನ್ನೆಲ್ಲಾ ಒಪ್ಪುವುದೇ ಇಲ್ಲ. ಏಕೆಂದರೆ ಅವಳು ನೋಡಿದ ಅಂದರೆ ಮೇಲ್ವರ್ಗದ ಹುಡುಗಿಯರು ಅವ್ವ ಹೇಳಿದ ಹಾಗೆ ಬರುತ್ತಿರುವುದಿಲ್ಲ. ಅದನ್ನು ಶರಣಮ್ಮನಿಗೆ ಹೇಳುತ್ತಾಳೆ. "ನನ್ನ ಗೆಳತೇರೊ ದೊಡ್ಡವರಾಗ್ಯಾರವ್ವ.. ಅವರೆಲ್ಲಾ ಪರಕಾರ ಜಾಕೀಟು ಊಟ್ಗೊಂಡೇ ಬರ್ತಾರ..." ಅದಕ್ಕೆ ಶರಣಮ್ಮ "ಅವೆಲ್ಲಾ ದೊಡ್ಡ ಮಂದೀ ಮಕ್ಕಳು ಹ್ಯಾಂಗ ಬಂದರನೂ ನಡೀತಾದ, ನೀ ಕೆಳಜಾತಿ ಬಡವನ ಮಗಳು ತಗ್ಗಿ-ಬಗ್ಗಿ ನಡಿಬೇಕು" (ಪು. ೨೨೨) ಶಾಂತಿ ಕೆಳಜಾತಿಯವಳಾದ್ದರಿಂದ ಅವಳಿಗೆ ಹಲವಾರು ಕಟ್ಟುಪಾಡುಗಳನ್ನು ಶರಣಮ್ಮ ಹೇರುತ್ತಾಳೆ. ಹೀಗೆ ಜಾತಿ ಧರ್ಮದ ನೆಪಯೊಡ್ಡಿ ಈ ದಲಿತ ಹೆಣ್ಣು ಮಕ್ಕಳನ್ನು ಅವರ ಹಿರಿಯ ತಲೆಮಾರಿನವರೇ ಅವರನ್ನು ಶೋಷಣೆ ಮಾಡುತ್ತಾ ಬಂದಿದ್ದಾರೆ.

ಕೆಳಜಾತಿ ಹೆಣ್ಣು ಮಕ್ಕಳು ಮಾಡುವ ಹರಕೆಗಳು ಯಾಕೆ, ಮಾಡುತ್ತಾರೆ. ಇದರಿಂದ ಏನು ಪ್ರಯೋಜನ ಇದನ್ನು ಮೊದಲು ಮಾಡಿದವರು ಯಾರು ಇಂತಹ ಹರಕೆಗಳಿಂದ ಯಾರಿಗೆ ಲಾಭ ಯಾರಿಗೆ ನಷ್ಟ, ಎಂದು ಯೋಚನೆ ಮಾಡದೇ ಅಮಾಯಕ ಹೆಣ್ಣು ಮಕ್ಕಳನ್ನು ಬಲಿಕೊಡುತ್ತಾರೆ.

"ದೊಡ್ಡವರು ಮಾಡ್ತಾರಂತ ಸಣ್ಣವರೂ ಮಾಡ್ತಾರ... ಹಿಂದಿನ ಹಿರೇರು ಮಾಡ್ತಾರಂತ ಮುಂದಿನ ಕಿರೇರನೂ ಮಾಡ್ಕೋತ ಬಂದಾರ... ಯಾಕಂತ ಯಾರಿಗಿನೂ ತೆಲ್ಯಾಗಾ ಹೊಳದಿಲ್ಲಂತ ಕಾಣಸ್ತದ..." (ಪು. ೧೮೯) ಹೀಗೆ ಶಾಂತಪ್ಪ ತನ್ನ ಮಗಳು ಶಾಂತಿಗೆ ಹೇಳುತ್ತಾನೆ. ಅರ್ಥವಿಲ್ಲದ ಆಚರಣೆಗಳಿಗೆ ಕುರಿಗಳನ್ನು ಬಲಿಕೊಡುವ ಹಾಗೆ ಅಮಾಯಕ ಹೆಣ್ಣುಮಕ್ಕಳನ್ನು ಬಲಿಕೊಡುತ್ತಾರೆ. "ಮಾಪುರ ತಾಯಿ ಜಾತ್ರೆ ನೋಡಲು ಹೈದ್ರಾಬಾದ್‌ಗಳಿಂದ ಜನ ಬರುತ್ತಿದ್ದರು. ನೀಚಾ ಬೆತ್ತಲೆಯ ಹೆಣ್ಣು, ಗಂಡುಗಳು, ಅವರ ಹಣೆಯ ತುಂಬಾ ಈಟಗಲ ಅರಿಶಿಣ, ಕುಂಕುಮ ಬಳಿದುಕೊಂಡು ಉಧೋ... ಉಧೋ.. ಎಂದು ಕೂಗುತ್ತಾ ಮೆರವಣಿಗೆ ನಡೆಯುತ್ತದೆ." (ಪು. ೧೮೯) ಇಂಥ ಪುಕ್ಕಟೆ ಮನರಂಜನೆಗೆಂದೇ ದೂರದ ಬೊಂಬಾಯಿಯಿಂದ ಮಂದಿ ಬರುತ್ತಿದ್ದರು. ಹಿಂದೆಲ್ಲಾ ಈ ಜಾತ್ರೆಗೆ ಆ ದಿನಗಳಲ್ಲಿ ಪ್ಯಾಟಿಗಳಿಂದ ಬರುವ ರೊಕ್ಕಸ್ಥ ಶೋಕಿಲಾಲ ಗಂಡಸರಿಂದ ತೆರೆಮರೆಯಲ್ಲಿ 'ಜೋಗಣಿ'ಯರನ್ನು ಕರೀದಿಸುತ್ತಿದ್ದರು. ಜಾತ್ರೆಗಳಲ್ಲಿ

ದನಗಳಿಗೆ ಬೆಲೆ ಕಟ್ಟುವಂತೆ ಈ ಹೆಣ್ಣುಗಳಿಗೆ ಬೆಲೆಕಟ್ಟ ಅವರ ಮಾನಮರ್ಯಾದೆ ಹರಾಜಾಕುತ್ತಿದ್ದರು.

"ಹೆಣ್ಣುಮಕ್ಕಳು ಮನುಷ್ಯರೇ, ಅವರಿಗೆ ಒಂದು ಮನಸ್ಸು ಇರುತ್ತದೆ. ಎನ್ನುವುದನ್ನು ಮರೆತು ಕೇವಲ ಲೈಂಗಿಕತೆಯ ಸುತ್ತಲೇ ಗಿರಕಿ ಹೊಡೆಯುವ ಇಂಥ ಹರಕೆಗಳನ್ನು ಹೊರುವವರು ಮಾತ್ರ ಹೊಲೆ ಮಾದಿಗರೇ ದೇವಿಯ ಹೆಸರಿನ ಮೇಲೆ ಹಾದರ ಮಾಡುವುದು, ಮೈಮೇಲೆ ಒಂದೇ ಒಂದೂ ನೂಲಿನೆಳೆಯೂ ಇಲ್ಲದ ಪೂರಾ ಹುಟ್ಟುಡೆಗಯಲ್ಲಿ ಬೆತ್ತಲೆ ಸೇವೆ ಮಾಡುವುದು ಹೀಗೆ ಬರೀ ಕಾಮಕ್ಕೆ ತಳಕು ಹಾಕಿಕೊಂಡ ಹರಕೆಗಳು ರೀತಿ ರಿವಾಜುಗಳೂ, ರೂಢಿ ನಂಬಿಕೆಗಳು, ಅದು ಯಾವ ಕಾಲದಲ್ಲಿ ಹೇಗೆ ಶುರುವಾದವೋ, ಯಾರು ಶುರುಮಾಡಿದರೋ, ಯಾರೂ ಇವತ್ತಿಗೂ ನಿಖರವಾಗಿ ಪತ್ತೆ ಹಚ್ಚಿಲ್ಲ! ಅದೂ ಬೇರೆ ಹೊಲೆ ಮಾದಿಗರಂಥ ನಿರ್ಗತಿಕ, ಅಸ್ಪೃಶ್ಯ ಮಂದಿಯಲ್ಲೇ ಮಾತ್ರ ಇಂಥ ಪದ್ಧತಿಗಳು ಹುಟ್ಟಿಕೊಂಡಿರುವುದು ಮಾತ್ರ ನಿಗೂಢದ ವಿಷಯವಾಗಿದೆ. ಪ್ರತ್ಯಕ್ಷವಾಗಿಯೇ ಪರೋಕ್ಷವಾಗಿಯೋ ಸಂವೇದನೆಗೆ ಒಳಗಾಗುವುದು ಮಾತ್ರ ಮಹಿಳೆಯರು.

# ಅಧ್ಯಾಯ ನಾಲ್ಕು

## ಬದುಕು ಮತ್ತು ಬಾಕಿ ಕಾದಂಬರಿಗಳಲ್ಲಿ ಮಹಿಳಾ ಸಂವೇದನೆಯ ತೌಲನಿಕ ವಿಶ್ಲೇಷಣೆ

'ಬದುಕು' ಮತ್ತು 'ಬಾಕಿ' ಈ ಎರಡು ಕಾದಂಬರಿಗಳು ಉತ್ತರ ಕರ್ನಾಟಕದ ಗ್ರಾಮೀಣ ಜನರ ಬದುಕಿನ ಸೊಗಡನ್ನು ಪ್ರತಿಬಿಂಬಿಸುತ್ತವೆ. ಬಡತನ, ಹಸಿವು, ದಾರಿದ್ರ್ಯ ಜೀತಪದ್ಧತಿ, ಸ್ತ್ರೀ ದಮನತೆ, ಮೂಢನಂಬಿಕೆ, ಹಾಸ್ಯ, ವಿಡಂಬನೆ, ಮೇಲು ಕೀಳು ಸಂಬಂಧಗಳನ್ನು ಪ್ರತಿಸೂಸುವುದನ್ನು ಕಾಣಬಹುದಾಗಿದೆ.

ಬದುಕು ಕಾದಂಬರಿಯಲ್ಲಿ ಮುಖ್ಯವಾಗಿ ಮಹಿಳಾ ಸಂವೇದನೆಯ ನೆಲೆಗಳನ್ನು ಗುರುತಿಸುವ ಸಂದರ್ಭದಲ್ಲಿ ಅಲ್ಲಿ ನಡೆಯುವ ಸ್ತ್ರೀ ಸಂಘರ್ಷದ ನೆಲೆಗಳನ್ನು ಕಾಣುವುದು ಒಂದು ಕಡೆಯಾದರೆ, ಕೆಳಜಾತಿಯವಳಾದ ಕಾಶಮ್ಮ ಇಡೀ ವ್ಯವಸ್ಥೆಯನ್ನು ಮೀರಿ ತನ್ನ ಬದುಕನ್ನು ತಾನೇ ಕಟ್ಟಿಕೊಂಡಿರುವ ಸಂದರ್ಭದಲ್ಲಿ ಅನುಭವಿಸಿರುವ ನೋವುಗಳು ಇನ್ನೊಂದು ಕಡೆ ಈ ರೀತಿಯಾದ ಸಂದರ್ಭಗಳು ಇಡೀ ವ್ಯವಸ್ಥೆಯ ಸಾಂಸ್ಕೃತಿಕ ಪಲ್ಲಟವಾಗುವುದನ್ನು ಬದುಕು ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ. ಇಲ್ಲಿ ಕಾಶಮ್ಮ ತನ್ನ ಮದುವೆಯಾಗುವವನು ವಿದ್ಯಾವಂತನಾಗಿರಬೇಕು. ಬಿಳಿ ಅಂಗಿ, ಧೋತರ ತೊಟ್ಟು ಮೇಲ್ ವರ್ಗದವರ ಹಾಗೇ ಇರಬೇಕು ಎಂದು ಬಯಸುವುದು. ಸಂಸ್ಕೃತಿಯ ಪಲ್ಲಟಗೊಳ್ಳುವುದನ್ನು ಕಾಣಬಹುದು. ಆದರೆ ಸಮಾಜದಲ್ಲಿ ಕಾಶಮ್ಮ ತನ್ನಾಸೆಯನ್ನು ನೆರವೇರಿಸಿಕೊಳ್ಳಲು ವ್ಯವಸ್ಥೆ ಬಿಡುವುದಿಲ್ಲವಾದರೂ ಕಾಶಮ್ಮ ವ್ಯವಸ್ಥೆಯನ್ನು ಮೀರಿ ತನ್ನ ಪ್ರೀತಿಯ ಲಿಂಗರಾಜನನ್ನು ಸೇರುತ್ತಾಳೆಂಬುದನ್ನು ವಿವರಿಸಿದ್ದಾರೆ.

'ಬಾಕಿ' ಕಾದಂಬರಿಯಲ್ಲಿ ನಗರ ಪರಿಸರದಲ್ಲಿ ಬೆಳೆದ ಶಾಂತಿಗೆ ಕಾಲೇಜು ದಿನಗಳಲ್ಲಿ ಸಿದ್ಧಾರ್ಥ ಪ್ರೀತಿಸುತ್ತೇನೆ, ನಿನ್ನ ಮದುವೆಯಾಗಲು ಎಷ್ಟು ದಿನಗಳು

ಬೇಕಾದರೂ ಕಾಯುತ್ತೇನೆ ಎಂದು ಅವಳಿಗೆ ಪ್ರೇಮ ನಿವೇದನೆ ಮಾಡಿಕೊಂಡ ಅದನ್ನು ಶಾಂತಿ ಒಪ್ಪಿಕೊಳ್ಳಲಾರದನ್ನು ಕಾಣುತ್ತೇವೆ. ಏಕೆಂದರೆ ಅವಳ ಮನೆಯ ಬಡತನವನ್ನು ಮುಖ್ಯ ಕಾರಣವಾಗಿ ನೀಡಿ ತಪ್ಪಿಸಿಕೊಳ್ಳುತ್ತಾಳೆ. ಮೇಲಿನ ಎರಡು ಕಾದಂಬರಿಗಳಲ್ಲಿ ಬರುವ ಈ ಘಟನೆಗಳನ್ನು ಗಮನಿಸಿದರೆ, ಲೇಖಕಿ ಕಾಶಮ್ಮನಿಗೆ ತನ್ನ ಎದೆಯಲ್ಲಿ ಮೂಡಿದ ಪ್ರೀತಿಯೇ ಮುಖ್ಯವಾಗಿ ಚಿತ್ರಿಸಿದ್ದಾರೆ. ಬಾಕಿ ಕಾದಂಬರಿಯಲ್ಲಿ ತನ್ನ ಪ್ರೀತಿಗಿಂತ ತಂದೆ-ತಾಯಿಯ ಕಾಳಜಿಯನ್ನು ಮುಖ್ಯವಾಗಿರಿಸಿದ್ದಾರೆ.

ಕಾದಂಬರಿಗಾರ್ತಿ ಸಮಾಜದಲ್ಲಿರವ ಅನಿಷ್ಟ ಪದ್ಧತಿಗಳನ್ನು ಹೇಳುತ್ತಾ ಇಂತಹ ಅನಿಷ್ಟ ಪದ್ಧತಿಗಳಿಗೆ ಬಲಿಯಾಗುವ ಮುಗ್ಧ ಜನಗಳ ಬಗ್ಗೆ ತಿಳಿಸುತ್ತಾ, ಈ ವ್ಯವಸ್ಥೆಯನ್ನು ವಿರೋಧಿಸುವ ನೆಲೆಗಳನ್ನು ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಬದುಕು ಕಾದಂಬರಿಯಲ್ಲಿ ನೀಲವ್ವ ಈ ವ್ಯವಸ್ಥೆಯ ಜೋಗಣಿ ಪದ್ಧತಿಗೆ ಬಲಿಯಾದರೇ ದುರುಗಿ-ಮುರುಗಿ ಎಂಬಂತಹ ಸ್ತ್ರೀ ಪಾತ್ರಗಳು ಜೋಗಿಣಿಯರಾಗಿ ನೋವನ್ನು ಅನುಭವಿಸುತ್ತಿರುವುದನ್ನು ಕಾಣುತ್ತೇವೆ. ತುಳಾಜನ ಪಾತ್ರವು ವ್ಯವಸ್ಥೆಯನ್ನು ವಿರೋಧಿಸುತ್ತಾ ವೈಚಾರಿಕ ಮನೋಭಾವವನ್ನು ಮೂಡುವಂತೆ ಮಾಡಿ, ಸಮಾಜದಲ್ಲಿ ಪ್ರಜ್ಞೆ ಮೂಡುವಂತೆ ಚಿತ್ರಿಸಲಾಗಿದೆ. ಅದೇ ರೀತಿಯಾಗಿ ಬಾಕಿ ಕಾದಂಬರಿಯಲ್ಲಿ ಶರಣಮ್ಮ ತನ್ನ ಮನೆಯ ಸಂಸಾರವನ್ನು ಬಡತನದಲ್ಲಿ ಸವೆಸಿದರೂ ತನ್ನ ಮಕ್ಕಳಿಗೆ ವಿದ್ಯೆಯನ್ನು ಕಲಿಸುತ್ತಾಳೆ. ಶಾಂತಿ ತನ್ನ ಮನೆಯ ಬಡತನದಿಂದ ಜಾತಿಯಿಂದಾಗಿ ಸಾಕಷ್ಟು ಅವಮಾನಗಳನ್ನು ಅನುಭವಿಸಿದ್ದರೂ ಓದುವುದನ್ನು ಬಿಡದೇ ಸಮಾಜಕ್ಕೆ ವೈಚಾರಿಕ ವಿಷಯಗಳನ್ನು ತಿಳಿಸುತ್ತಾಳೆ.

ಈ ವ್ಯವಸ್ಥೆಯಲ್ಲಿ ಕೇವಲ ಹಣವಂತರು ಮತ್ತು ಗೌಡರು, ಸಾವ್ಕರರು ಜನರಿಗೆ ತೊಂದರೆ ಕೊಡದೇ, ಅಕ್ಷರಸ್ಥರಾದ ಮುಖ್ಯ ಹುದ್ದೆಯನ್ನು ಅಲಂಕರಿಸಿದರೂ ಸಹ ಜನರಿಗೆ ನೋವುಂಟು ಮಾಡುವುದನ್ನು ಕಾಣುತ್ತೇವೆ. ಜನರನ್ನು ರಕ್ಷಣೆ ಮಾಡುವವರೇ, ಶೋಷಣೆ ಮಾಡುತ್ತಾರೆ. ಶಾಣಪ್ಪನ ಹೆಂಡತಿ ಬಸ್ಯಮ್ಮ, ನಾಗ್ಯನ ಹೆಂಡತಿ ಗುಜ್ಜವರು ಪೋಲಿಸರ ದರ್ಪಕ್ಕೆ ಬಲಿಯಾಗುವುದನ್ನು ಬದುಕು ಕಾದಂಬರಿಯಲ್ಲಿ ಕಾಣಬಹುದಾಗಿದೆ.

ವಿದ್ಯಾವಂತರಾದ ಟುಟೋರಿಯಲ್ ಸಂಸ್ಥೆಯವರಿಂದ ಮತ್ತು ಶರಣಬಸವೇಶ್ವರ ವಿದ್ಯಾವರ್ಧಕ ಸಂಸ್ಥೆಯವರಿಂದ ಅವಮಾನಕ್ಕೆ ಒಳಗಾಗುವುದನ್ನು ಬಾಕಿ ಕಾದಂಬರಿಯಲ್ಲಿ ಮಹಿಳೆಯರನ್ನು ಕೇವಲ ಅನಕ್ಷರಸ್ಥರು ಮಾತ್ರ ಮೋಸ ಮಾಡದೇ ವಿದ್ಯಾವಂತರು ಸಹ ಅವರನ್ನು ಶೋಷಣೆಗೆ ಒಳಪಡುವುದನ್ನು ಕಾಣಬಹುದು. 'ಬದುಕು' ಕಾದಂಬರಿಯು ಉತ್ತರ ಕರ್ನಾಟಕದ ಹಳ್ಳಿಯ ವಾತಾರಣದಲ್ಲಿರುವಂತಹ ಜಾತಿ ವ್ಯವಸ್ಥೆಯ ಕುರಿತು

ಹೇಳುತ್ತಾ, ಅಲ್ಲಿಯ ಹಬ್ಬ ಹರಿದಿನಗಳಲ್ಲಿ ಸಾಮರಸ್ಯವಾಗಿ ಜನರು ಬೆರೆಯುತ್ತಾ ಮೋಹರಂ, ಹೋಳಿ, ಕಾರುಹುಣ್ಣಿಮೆಯ ಹಬ್ಬಗಳನ್ನು ಎಲ್ಲರೂ ಕೂಡಿ ಸಂತೋಷದಿಂದ ಆಚರಿಸುತ್ತಿರುವುದನ್ನು ವಿವರಿಸಲಾಗಿದೆ. ಮತ್ತೊಂದು ಕಡೆ, ಮಾಪುರ ತಾಯಿಯ ಜಾತ್ರೆಯಲ್ಲಿ ದಲಿತ ಕೇರಿಯ ಹರೆಯದ ಹೆಣ್ಣುಮಕ್ಕಳನ್ನು ಜೋಗಣಿಯಾಗಿ ಬಿಡುವ ಪದ್ಧತಿಯಿಂದ ಮಹಿಳೆಯರು ಅನುಭವಿಸುತ್ತಿರುವ ವೇದನೆಗಳನ್ನು ಕಾಣಬಹುದು. ಕೆಳಜಾತಿಯವಳಾದ ನೀಲವ್ವ ಪೂಜಾರಿಯ ಮತ್ತು ಗೌಡರ ಕುತಂತ್ರಕ್ಕೆ ಜೋಗಣಿಯಾಗಿ ಸೂಳೆಯಾಗಿ, ಬಾಳುವೆ, ಬಾಳು, ಬಾಳಲಾಗದೆ ಆತ್ಮಹತ್ಯೆ ಮಾಡಿಕೊಂಡು ತನ್ನ ಬಾಳನ್ನು ಕೊನೆಗಾಣಿಸಿಕೊಳ್ಳುತ್ತಾಳೆ ಎಂಬುದನ್ನು ಬಹಳ ವಿಡಂಬನೆಯಾಗಿ ಚಿತ್ರಿಸಲಾಗಿದೆ.

ಬಾಕಿ ಕಾದಂಬರಿಯಲ್ಲಿಯೂ ಸಹ ಶರಣಮ್ಮನ ಎರಡನೇ ಮಗಳು ಚಂದ್ರಕಲಾ, ಪುರುಷರ ಮೋಸಕ್ಕೆ ಒಳಗಾಗಿ ತನ್ನ ಮಗಳನ್ನು ಅನಾಥೆಯನ್ನಾಗಿ ಮಾಡಿ ಕೊನೆಯುಸಿರೆಳೆಯುತ್ತಾಳೆ. ಮಹಿಳೆಯರು ಒಂದಲ್ಲವೊಂದು ಕಾರಣಕ್ಕೆ ಪುರುಷರ ದೌರ್ಜನ್ಯಕ್ಕೆ ಸಿಲುಕಿ ಬಳಲುತ್ತಾರೆ.

ಬದುಕು ಕಾದಂಬರಿಯ "ಶ್ರೇಣಿಕೃತ ಸಮಾಜದಲ್ಲಿ ಕಬ್ಬಲಿಗ, ಬೇಡ,ಕೊರವ, ಎಂದೆಲ್ಲಾ ವಿವಿಧ ಜಾತಿಗೆ ಸೇರಿದ ಮಹಿಳೆಯರಾದರೂ ಒಬ್ಬರಿಗೊಬ್ಬರು ಆಸರೆಯಾಗುತ್ತಾರೆ ವಿನಃ ಹೆಣ್ಣಿಗೆ ಹೆಣ್ಣು ಶತ್ರು ಎಂಬಂಥ ಪುರುಷ ವ್ಯವಸ್ಥೆ ಹುಟ್ಟುಹಾಕಿದ ಹುನ್ನಾರದ ದಾಳಗಳಾಗುವುದಿಲ್ಲ."(ಮಹಿಳಾ ಅಧ್ಯಯನ, ಸಂಯುಕ್ತ ಸಂಚಿಕೆ, ಪು.೧೨೦, ಸಂಚಿಕೆ-೭) ಕಲ್ಯಾಣಿ ಜೈಲಿಗೆ ಹೋದಾಗ ಬೆಳ್ಳಿ ತನ್ನ ಅತ್ತೆಯ ಅಗಲಿಕೆಯಿಂದ ಏಕಾಂಗಿಯಾಗುತ್ತಾಳೆ. ಆಗ ಬ್ಯಾಡರ ನಾಗವ್ವ, ಕೊರವರ ಈರವ್ವ, ನಜಾಮಾ ಬೆಳ್ಳಿಗೆ ಸಹಾಯಕರಾಗಿ ನಿಲ್ಲುವುದನ್ನು ನೋಡಿದರೆ ಬಾಕಿ ಕಾದಂಬರಿಯ ಶರಣಮ್ಮನ ಕುಟುಂಬಕ್ಕೆ ಮರಾಠಿ ಹೆಣ್ಣುಮಗಳಾದ ಸರಸ್ವತಿಬಾಯಿ ಸಹಾಯ ಮಾಡುತ್ತಾಳೆ. ಹೀಗೆ ಒಬ್ಬರಿಗೊಬ್ಬರು ನೆರವಾಗುತ್ತಾ ಮಾನವೀಯತೆಯನ್ನು ಮೆರೆಯುವುದನ್ನು ನೋಡಬಹುದು.

'ಬದುಕು' ಕಾದಂಬರಿಯಲ್ಲಿ ಕಾದಂಬರಿಕಾರ್ತಿ ಈ ದಲಿತ ಸಮುದಾಯದಲ್ಲಿಯ ಹದಿ ಹರೆಯದ ಹೆಣ್ಣುಮಕ್ಕಳನ್ನು ಜೋಗಣಿ ಬಿಡುವ ಪದ್ಧತಿಯ ಬಗ್ಗೆ ಬಹಳ ವಿಸ್ತೃತವಾಗಿ ಚಿತ್ರಿಸಲಾಗಿದೆ. ಇಲ್ಲಿ ಭರಮ್ಮಪ್ಪನ ಮಗಳು ನೀಲವ್ವನನ್ನು ಜೋಗಣಿಯಾಗಿ ಬಿಡಲು ಪೂಜಾರಪ್ಪ ಹೇಳುತ್ತಾನೆ. ಇದು ಗೌಡರ, ಕುಲಕರ್ಣಿ, ಸಾವ್ಕರರು ತಮಗೆ ದಲಿತ ಕೇರಿಯ ಹೆಣ್ಣುಮಕ್ಕಳು ಇಷ್ಟವಾದರೆ, ಪೂಜಾರಿಯ ಮುಖಾಂತರ ಮಾಪುರ ತಾಯಿಯ ಸೇವೆಗೆ ನಿಮ್ಮ ಮಕ್ಕಳನ್ನು ಬಿಡಬೇಕು ಎಂದು ಹೇಳಿಸಿ ತಂದೆ-ತಾಯಿಗಳ ಮತ್ತು ಹರೆಯದ ಹೆಣ್ಣುಮಕ್ಕಳ ಬಾಳನ್ನೇ ನಾಶಮಾಡುತ್ತಾರೆ. ಈ ಪದ್ಧತಿಯು ಹಿಂದಿನ

ಎಷ್ಟೋ ತಲೆಮಾರಿನವರು ನಡೆಸಿಕೊಂಡು ಬಂದಂತಹ ಇಂತಹಾ ಹರಕೆಗಳು ಕೇವಲ ದಲಿತ ವರ್ಗದ ಹೆಣ್ಣುಮಕ್ಕಳಿಗೆ ಮಾತ್ರ ಸೀಮಿತವಾಗಿದ್ದವು. ಇಂತಹ ಹರಕೆಗಳು ಈಗೀನ ತಲೆಮಾರಿನವರು ಬೇಡ ಎಂದರೂ ಬಲವಂತವಾಗಿ ಅವರ ಮೇಲೆ ಏರಿ ಬಾಳನ್ನೇ ಹಾಳು ಮಾಡುತ್ತಾರೆ. "ತಂದೆ-ತಾಯಿಗಳಿಗೆ ಬೆಂಕಿ ಹಂತಾ ದೇವತಿ ಚುಂಚೂರು ಮಾಪುರ ತಾಯಿ ಆಕೀನ ಹರಕಿ ಬಿಟ್ಟು ಬದಕಲಕ್ಕ ಆಗ್ತದೇನು? ಏಟು ತ್ರಾಸು ಆದರನೂ ಹರಕಿ ಒಪ್ಪಿಸಬೇಕು ನೋಡು." (ಬದುಕು, ಪು.೩೪,)

ಕೆಳಜಾತಿಯ, ತಂದೆ-ತಾಯಿ ಮನಸ್ಸಿನಲ್ಲಿ ಮಾಪುರ ತಾಯಿ ದೇವಿಯ ಬಗ್ಗೆ ಭಯ ಹುಟ್ಟಿಸಿ ತಮ್ಮ ಹೆಣ್ಣುಮಗಳನ್ನು ತಾಯಿಯ ಸೇವೆಗೆ ಬಿಡುವಂತೆ ಮಾಡಿ ತಂದೆ-ತಾಯಿಗಳು ಮಗಳನ್ನು ನೆನಪಿಸಿಕೊಂಡು ನೋವುಪಡುವಂತೆ ಈ ವ್ಯವಸ್ಥೆ ಮಾಡಿರುತ್ತದೆ.

'ಬಾಕಿ' ಕಾದಂಬರಿಯಲ್ಲಿ ಶರಣಮ್ಮ ತನ್ನ ಮಗಳ ಬಾಳು ತಾವೇ ಹಾಳು ಮಾಡಿ ಬಿಟ್ಟೇವು ಎಂದು ಮನಸ್ಸಿನಲ್ಲಿ ಕೊರಗುತ್ತಿರುತ್ತಾಳೆ. "ನಿನಗ ಮದವಿ ಮಾಡಿದ್ದೇ ನಮ್ಮ ದೊಡ್ಡ ತಪ್ಪಾಯ್ತು ಮಗಾ ಈ ಮದುವಿನೇ ಬ್ಯಾಡಂತ ನೀನು ಖಡಾಮುಡಿಯಾಗಿ ಹೇಳಲಿಲ್ಲ ನೋಡು ಮದವಿ ವಯಸ್ಸಿಗಿ ಬಂದಿರೋ ಮಗಳಿಗಿ ಮದಿ ಮಾಡಲಾರ್ದೆ ಶಾಂತಪ್ಪ ಆಕಿನ ಗಳಿಕಿ ತಿನ್ನಾಕ ಆಸೆ ಬಿದ್ದಾನ ಅಂತ ಬಂಧು ಬಳಗದಾಗ ಅಲ್ಲಲ್ಲಿ ಯಾರ್‍ಯಾರೋ ಆಡ್ಕೊಳ್ಳೋ ಮಾತುಗೊಳು ನನ್ ಕಿವಿಗಿ ಬಿದ್ದು ಘಾಸಿ ಮಾಡಿದವು ಮಗಳೇ" (ಬಾಕಿ, ಪು.೪೦೮) ಎಂದು ಶಾಂತಪ್ಪ ಮಗಳ ಮುಂದೆ ತನ್ನ ನೋವನ್ನು ಹೇಳಿಕೊಳ್ಳುತ್ತಾನೆ. ಶಾಂತಿಗೆ ಇಷ್ಟವಿಲ್ಲದಿದ್ದರೂ ತಂದೆ-ತಾಯಿ ಬಲವಂತಕ್ಕೆ ಶಿವಣ್ಣನನ್ನು ಮದುವೆ ಯಾಗುತ್ತಾಳೆ. ಅವಳು ಮದುವೆಯಾದ ಸ್ವಲ್ಪ ದಿನಗಳಲ್ಲಿ ಸಂಬಂಧ ಮುರಿದು ಬೀಳುತ್ತದೆ. ಮಗಳ ವೈವಾಹಿಕ ಜೀವನ ಹಾಳಾಗಿ ಬಿಡುತ್ತದೆ. ಇದರಿಂದ ತಮ್ಮ ಮಗಳ ಭವಿಷ್ಯ ನಾವೇ ಹಾಳು ಮಾಡಿದೇವು. ಶಾಂತಿಗೆ ಮದುವೆ ಇಷ್ಟ ಇಲ್ಲದಿದ್ದರೂ ನಮ್ಮ ಬಲವಂತಕ್ಕೆ ಒಪ್ಪಿಕೊಂಡು ತನ್ನ ಜೀವನವನ್ನು ಬಲಿಕೊಟ್ಟಳು ಎಂದು ಒಂದು ರೀತಿ ವ್ಯಸನಕ್ಕೆ ತುತ್ತಾಗುತ್ತಾರೆ. ಶಾಂತಪ್ಪ ಶರಣಮ್ಮ ಈ ಎರಡು ಕಾದಂಬರಿಗಳಲ್ಲಿ ತಂದೆ-ತಾಯಿಗಳ ಬಲವಂತಕ್ಕಾಗಿ ಒಬ್ಬರು ಜೋಗಣಿಯಾಗಿ, ತಮ್ಮ ಜೀವನವನ್ನೇ ಬಲಿಕೊಟ್ಟರೇ, ಇನ್ನೊಬ್ಬರು ತಂದೆ-ತಾಯಿಯ ಬಲವಂತಕ್ಕೆ ಒಲ್ಲದ ಮನಸ್ಸಿನಿಂದ ಮದುವೆಯಾಗಿ ತನ್ನ ಜೀವನವನ್ನೇ ಹಾಳು ಮಾಡಿಕೊಂಡು ಜೀವನದಲ್ಲಿ ಜಿಗುಪ್ಸೆ ಹೊಂದುತ್ತಾಳೆ. ಕಾದಂಬರಿಗಾರ್ತಿ ಎರಡು ಕಾದಂಬರಿಯಲ್ಲಿ ಮಕ್ಕಳು ಸುಖ ಸಂತೋಷಗಳ ಮಹತ್ವವನ್ನು ಅರಿತು ಅವರ ವಿರುದ್ಧವಾಗಿ ಯಾವುದೇ ನಿರ್ಧಾರಗಳನ್ನು ತೆಗೆದುಕೊಳ್ಳಬಾರದು ಎನ್ನುವ ನೈಜತೆಯನ್ನು ಕಾದಂಬರಿಯಲ್ಲಿ ತಿಳಿಸಿದ್ದಾರೆ.

ಲೇಖಕಿ ಕಾದಂಬರಿಗಳಲ್ಲಿ ಮಹಿಳೆಯರು ಕೇವಲ ಶೋಷಣೆಗೆ ಒಳಗಾಗುವುದನ್ನು ನೋವುಗಳನ್ನು ಅನುಭವಿಸುತ್ತಿರುವುದನ್ನು, ಮೂಢನಂಬಿಕೆಗಳಿಗೆ ಬಲಿಯಾಗುತ್ತಿರುವುದನ್ನು ಚಿತ್ರಿಸದೆ, ಮಹಿಳೆಯರಿಗೆ ಅನ್ಯಾಯಗಳಾಗಿದ್ದರೆ. ಅವುಗಳನ್ನು ಪ್ರಶ್ನಿಸುವ ವಿರೋಧಿಸುವ, ಟೀಕಿಸುವ ಪಾತ್ರಗಳನ್ನು ನಿರ್ಮಿಸಿದ್ದಾರೆ. ಬದುಕು ಕಾದಂಬರಿಯಲ್ಲಿ ತುಳಾಜನನ್ನು ವೈಚಾರಿಕ ನೆಲೆಯಲ್ಲಿ ಸಕಾರಾತ್ಮಕವಾಗಿ ಚಿತ್ರಿಸಿದ್ದಾರೆ.

ತುಳಜಾ ಜೋಗಣಿಯಾದರೂ ಹುಸೇನಪ್ಪನನ್ನು ಮದುವೆಯಾಗಿ ಮಗುವನ್ನು ಪಡೆದಿರುತ್ತಾಳೆ. ತಂದೆ–ತಾಯಿಯನ್ನು ನೋಡಲು ಹಳ್ಳಿಗೆ ಬಂದಾಗ ಹಳ್ಳಿಯ ಪಂಚಾಯ್ತಿ ಜನರ ಕೆಂಗಣ್ಣಿಗೆ ಗುರಿಯಾಗುತ್ತಾಳೆ. ಹಳ್ಳಿಯ ಪೂಜಾರಿ, ಗೌಡರು, ಸಾವ್ಕರರು, ತುಳಾಜನ ತಂದೆ–ತಾಯಿ ಇರುವ ಗುಡಿಸಲಿಗೆ ಬೆಂಕಿ ಹಚ್ಚುತ್ತಾರೆ. ಪಂಚಾಯ್ತಿಯಲ್ಲಿ ಇವರಿಗೆ ದಂಡ ಹಾಕಿ ಊರಿನಿಂದ ಬಹಿಷ್ಕಾರ ಹಾಕುತ್ತಾರೆ. ತುಳಾಜನಿಗೆ ತನ್ನ ಗಂಡನನ್ನು ಬಿಟ್ಟು ಜೋಗಣಿಯಾಗಿ ದೇವಿಯ ಸೇವೆ ಮಾಡಬೇಕು ಎಂದು ನಿರ್ಧರಿಸಿದ್ದರೆ ಅದನ್ನು ಆಕೆ ಸಾರಸಗಟವಾಗಿ ವಿರೋಧಿಸುತ್ತಾಳೆ. ತುಳಜಾ ಪಂಚಾಯಿತಿಯಲ್ಲಿ ತಂದೆಯ ಕೈ ಹಿಡಿದು "ದೈವದವರೇ.... ನೀವೂ ಒಂದೀಟು ನನ್ನ ಪೈಸಲಾನೂ ಕೇಳಿ ಹೋಗ್ರೀ... ನೀವು ಕೊಟ್ಟ ತೀರ್ಮಾನ ನಮಗ ಒಪ್ಪಿಗಿಯಿಲ್ಲ. ಏಕತರಫಾನ್ಯಾಯ ನಿಮ್ದು ನಾವೇನೂ ತಪ್ಪು ದಂಡಾ ಕೊಡಂಗಿಲ್ಲ. ಹಾಂಗ ಕೊಡ್ಲಕ ನಾವೇನೂ ತಪ್ಪು ಕೆಲಸ ಮಾಡಿಲ್ಲ! ನೀವು ನಮ್ಮಪ್ಪಗೇನು ಕುಲದಲಿಂದ, ಕೇರಿಲಿಂದ ಹೊರಗಿಡ್ತೀರಿ? ನಾನೇ ನಮ್ಮಪ್ಪಾ ಅವ್ವಗ ಈ ಊರು ಕೇರಿಲಿಂದ ದೂರ ಮಾಡಿ ನನ್ ಜೋಡಿ ಕರ್ಕೊಂಡು ಹೋಗ್ತೀನಿ.... ನಿಮಗಾ ನಿಮ್ಮ ನ್ಯಾಯಕ್ಕಾ ದೊಡ್ಡ ನಮಸಗಾರ್ರಿಯಪ್ಪಾ..." ಎಂದು ಹಳ್ಳಿಯನ್ನೇ ತೊರೆದು ಹೋಗುತ್ತಾಳೆ. (ಬದುಕು, ಪು. ೨೨೪)

ಬಾಕಿ ಕಾದಂಬರಿಯಲ್ಲಿ ಶಾಂತಿ ತನಗೆ ಆದ ಅನ್ಯಾಯ ಅವಮಾನ, ಸಂಕಟ, ದುಃಖ ದುಮ್ಮಾನಗಳನ್ನು ತನ್ನ ಬರಹಗಳ ಮೂಲಕ ಹೊರಹಾಕುತ್ತಾರೆ. ಶಾಂತಿಯ ಎಲ್ಲಾ ಬರಹಗಳು ವೈಚಾರಿಕ ನೆಲೆಗಳಲ್ಲಿಯೇ ಬರೆದು ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಿದ್ದಾರೆ. ಹೀಗೆ ಎರಡು ಕಾದಂಬರಿಯಲ್ಲಿ ವೈಚಾರಿಕ ನೆಲೆಗಳನ್ನು ಕಾಣಬಹುದು. ಕಾದಂಬರಿಗಾರ್ತಿ ಬದುಕು ಕಾದಂಬರಿಯಲ್ಲಿ ಬೆಳ್ಳಿಯಂತಹ ದಿಟ್ಟ ಪಾತ್ರಗಳನ್ನು ಮೂಡಿಸಿದ್ದಾರೆ. ಬೆಳ್ಳಿಯ ಗಂಡ ಜೈಲಿಗೆ ಸೇರಿದಾಗ ಕೇಸಿಗಾಗಿ ಮನೆಯಲ್ಲಿದ್ದ ನಗನಾಣ್ಯಗಳನ್ನೆಲ್ಲ ಕಳೆದುಕೊಂಡು ಸಂಸಾರದ ನಿರ್ವಹಣೆ ಕಷ್ಟಸಾಧ್ಯವಾದಗ ಸಿಂದಿ ಬಾರಗಿ ಕಟ್ಟುವ ಚಾಪೆ, ನೇಯುವ ಕೆಲಸವನ್ನು ಕೊರವರ ಈರಮ್ಮನಿಂದ ಕಲಿತು ಆದಾಯದ ಮೂಲವನ್ನು ಕಂಡುಕೊಳ್ಳುತ್ತಾಳೆ. ಬೆಳ್ಳಿ ಈ ಕೆಲಸ ಆರಂಭಿಸಿದಾಗ ಸಂಪ್ರದಾಯಸ್ಥರು 'ಬೆಳ್ಳಿ' ಚಪ್ಪಲಿ ಹೋಲಿಯುವ ಕೆಲಸ ಬೇಕಾದರೂ ಮಾಡುತ್ತಾಳೆ.

ಎಂದು ವ್ಯಂಗ್ಯವಾಡುತ್ತಾರೆ. ಬೆಳ್ಳಿ ಇದಾವುದಕ್ಕೂ ಲಕ್ಷ ಕೊಡದೆ ಮುನ್ನಡೆಯುತ್ತಾಳೆ. ಗಂಡ ಜೈಲಿನಿಂದ ಬಿಡುಗಡೆಯಾಗಿ ಬರುವವರೆಗೆ ಹದಿನಾಲ್ಕು ವರ್ಷ ಸಂಯಮದಿಂದ ಕಾಯುತ್ತಾಳೆ. ಒಂಟಿ ಹೆಂಗಸರನ್ನು ನೋಡಿದರೆ ಹಲವಾರು ಜನ ಅವರ ಮೇಲೆ ಕಣ್ಣುಹಾಕುತ್ತಾರೆ. ಹಾಗೆಯೇ ವಿರೂಪಾಕ್ಷಗೌಡ, ಅವಳನ್ನು ವಶಪಡಿಸಿಕೊಳ್ಳಲು ಬಂದಾಗ ಹಲವು ರೀತಿಯ ಪ್ರಯತ್ನಗಳನ್ನು ಮೆಟ್ಟಿ ನಿಲ್ಲುತ್ತಾಳೆ.

ಬೆಳ್ಳಿ ತನ್ನ ಮಕ್ಕಳನ್ನು ಸಹ ವಿದ್ಯಾವಂತರನ್ನಾಗಿ ಮಾಡುತ್ತಾಳೆ. ಆದರೆ ಮಗ ಸಣ್ಣ ಮಲ್ಲು ತನ್ನ ತಂದೆ ಜೈಲಿಗೆ ಹೋಗಿ ಬಂದವನು ಎಂದು ತಂದೆಯೊಂದಿಗೆ ಸಂಬಂಧ ಬೇಡವೆಂದಾಗ ತಿಳಿ ಹೇಳುತ್ತಾಳೆ. ಆದರೂ ಸಹ ತನಗೂ ಹೇಳದೇ ಮಗ ಮರಾಠಿ ಹುಡುಗಿಯನ್ನು ಮದುವೆಯಾಗುತ್ತಾನೆ. ಇದರಿಂದ ತಂದೆ–ತಾಯಿಗೆ ಬೇಸರವಾಗುತ್ತದೆ. ಬೆಳ್ಳಿ ಕುಗ್ಗದೇ ತನ್ನ ಗಂಡನಿಗೆ ಸಮಾಧಾನ ಮಾಡುತ್ತಾಳೆ. ಬೆಳ್ಳಿ ತನ್ನ ಮಕ್ಕಳಿಗಾಗಿ ಗಂಡನಿಗಾಗಿ ಎಷ್ಟೇ ಕಷ್ಟಪಟ್ಟರೂ, ಕಲ್ಯಾಣಿ ಜೈಲಿಗೆ ಹೋಗಿ ವಾಪಸ್ಸು ಬಂದ ನಂತರ ಅವನಲ್ಲಿ ಮೊದಲು ಇದ್ದಂತಹ ಜೀವನದ ಉತ್ಸಾಹವಿರುವುದಿಲ್ಲ ಮತ್ತು ಮಗ ದೂರವಾದದ್ದು ಅವಳಿಗೆ ಕೊರೆಯುತ್ತಿರುತ್ತದೆ ಕೊನೆಯವರೆಗೂ ಬೆಳ್ಳಿಗೆ ನೆಮ್ಮದಿ ಖುಷಿ ಸಿಗುವುದಿಲ್ಲ.

ಬಾಕಿ ಕಾದಂಬರಿಯಲ್ಲಿ ಶಾಂತಿ ಶ್ರೀಕಾಂತನನ್ನು ಮದುವೆಯಾದ ನಂತರ ತನ್ನ ತಂದೆ–ತಾಯಿಯಿಂದ ದೂರವಾಗುತ್ತಾಳೆ. ಶಾಂತಿ ಮಕ್ಕಳಿಗಾಗಿ ದುಡಿಯುತ್ತಾಳೆ. ಹಸಿ ಬಾಣಂತಿಯಾದರೂ, ತನ್ನ ಮಗುವನ್ನು ಬಿಟ್ಟು ಕಾಲೇಜು ಕೆಲಸಕ್ಕೆ ಹೋಗುತ್ತಾಳೆ. ಶ್ರೀಕಾಂತನಿಂದ ಯಾವುದೇ ಹಣದ ಸಹಾಯ ದೊರೆಯುವುದಿಲ್ಲ ಬದಲಾಗಿ ಶಾಂತಿಯ ದುಡಿಮೆಯ ಹಣವನ್ನು ಶ್ರೀಕಾಂತ ಬಲವಂತವಾಗಿ ಕಸಿದುಕೊಂಡು ಹೋಗುತ್ತಿರುತ್ತಾನೆ. ಶಾಂತಿ ತನ್ನ ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡುತ್ತಾಳೆ. ಅವರ ಕಾಲ ಮೇಲೆ ಅವರು ನಿಲ್ಲುವ ಹಾಗೆ ಮಾಡುತ್ತಾಳೆ. ಆದರೆ ಮಕ್ಕಳು ಉದ್ಯೋಗದ ನೆಪಯೊಡ್ಡಿ ದೂರ ದೂರ ಹೋಗುತ್ತಾರೆ. ಶಾಂತಿ ಮುಪ್ಪಿನ ಕಾಲದಲ್ಲಿ ಏಕಾಂಗಿಯಾಗಿ ಜೀವನ ಸಾಗಿಸುವುದು ಅಲ್ಲದೇ ಇಳಿ ವಯಸ್ಸಿನಲ್ಲಿ ಮಕ್ಕಳ ಪ್ರೀತಿ, ಮಮತೆ, ದೊರೆಯದೇ ಹೋಗುವುದನ್ನು ಇಲ್ಲಿ ಕಾಣಬಹುದು.

'ಬದುಕು' ಮತ್ತು ಬಾಕಿ ಎರಡು ಕಾದಂಬರಿಗಳಲ್ಲಿ ಕಾದಂಬರಿಯ ನಾಯಕಿಯಂತಿರುವ ಬೆಳ್ಳಿಗೆ ಮತ್ತು ಶಾಂತಿಗೆ ಜೀವನದಲ್ಲಿ ಕಷ್ಟಗಳನ್ನು ನೋವುಗಳನ್ನು ಅನುಭವಿಸುತ್ತಾ, ಮಕ್ಕಳನ್ನು ಬೆಳೆಸುತ್ತಾರೆ. ತಾಯಿಯರು ತಮ್ಮ ಮಕ್ಕಳಿಗೆ ಮಾತ್ರ ಯಾವುದೇ ಕಷ್ಟಗಳು ಬರದಂತೆ ಸುಖವಾಗಿ ಬೆಳೆಸುತ್ತಾರೆ. ಆದರೆ ಮಕ್ಕಳಿಗೆ ತಮ್ಮ

ತಾಯಿಯರು ಪಟ್ಟಿರುವ ಕಷ್ಟಗಳು ಅರ್ಥವಾಗದೇ ಕೊನೆಗಾಲದಲ್ಲಿ ಅವರನ್ನೇ ತೊರೆದು ದೂರ ಹೋಗುವುದನ್ನು ಕಾದಂಬರಿಕಾರ್ತಿ ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ.

ಈ ಎರಡು ಕಾದಂಬರಿಗಳಲ್ಲಿ ಕಾದಂಬರಿಕಾರ್ತಿ ಹಳ್ಳಿಗಳಲ್ಲಿ ರೈತ ಮಹಿಳೆಯರು, ಕಾರ್ಮಿಕ ಮಹಿಳೆಯರು, ದಲಿತ ಮಹಿಳೆಯರು, ಮೇಲ್ವರ್ಗದ ಜನರ ದೌರ್ಜನ್ಯಕ್ಕೆ ಹೇಗೆ ಬಲಿಯಾಗುತ್ತಾರೆ ಎಂದು ಎಳೆ ಎಳೆಯಾಗಿ ವಿವರಿಸಿದ್ದಾರೆ. ಮೇಲ್ಜಾತಿಯ ಮಹಿಳೆಯರು ಕೇವಲ ಮೇಲ್ಜಾತಿಯ ಪುರುಷರಿಂದ ಶೋಷಣೆಗೆ ಒಳಗಾದರೆ, ದಲಿತ ಮಹಿಳೆಯರು ಮೇಲ್ಜಾತಿ ಪುರುಷ ಮಹಿಳೆ ಮತ್ತು ದಲಿತ ಪುರುಷರಿಂದಲೂ ಶೋಷಣೆಗೆ ಬಲಿಯಾಗುತ್ತಾರೆ. ಶಿಕ್ಷಣ ಪಡೆಯುವ ವ್ಯವಸ್ಥೆ ತಮ್ಮ ಮೇಲೆ ಹೇರಿದ ಕಟ್ಟುಪಾಡುಗಳನ್ನು ಮೀರುವ, ನೈತಿಕತೆಯನ್ನು ಸವಾಲಾಗಿ ಸ್ವೀಕರಿಸುವ ಸ್ತ್ರೀಯರು ಕಾದಂಬರಿಯಲ್ಲಿ ಮೂಡಿಬಂದಿದ್ದಾರೆ. ಅಂತೆಯೇ ವ್ಯವಸ್ಥೆಯೂ ಕಬಂಧ ಹಿಡಿತದಲ್ಲಿ ನಲುಗಿ ನಾಶವಾಗುವ ಸ್ತ್ರೀಯರನ್ನು ಇಲ್ಲಿ ಚಿತ್ರಿಸಿದ್ದಾರೆ. ಕಾದಂಬರಿಕಾರ್ತಿ ಬದುಕು ಕಾದಂಬರಿಯಲ್ಲಿ ಹೆಚ್ಚಾಗಿ ಹಳ್ಳಿಯ ಜನ–ಜೀವನದ ಬಗ್ಗೆ ಮತ್ತು ಹಳ್ಳಿಗಾಡಿನ ಮಹಿಳೆಯರ ಆಸೆಗಳನ್ನು ನೋವುಗಳನ್ನು ವಿವರಿಸುತ್ತಾರೆ ಒಂದು ಕುಟುಂಬದಲ್ಲಿ ಹೆಣ್ಣು ಮಕ್ಕಳಿಂದ ಯಾವ ರೀತಿಯ ಬದಲಾವಣೆಯಾಗುತ್ತದೆ ಎಂಬ ಆಶಯವನ್ನು ಇಟ್ಟುಕೊಂಡು ರಚಿಸಿದ್ದಾರೆ. ಕಾಶಮ್ಮನಿಂದ ಅವಳ ತಂದೆ ಜಮದಾರ ಮಲ್ಲಪ್ಪ ಆತ್ಮಹತ್ಯೆ ಮಾಡಿಕೊಂಡರೆ, ತಮ್ಮ ಕಲ್ಯಾಣಿ ಜೈಲು ಸೇರುತ್ತಾನೆ. ಎನ್ನುವುದನ್ನು ಕೇವಲ ನೆಪಮಾತ್ರವಾಗಿ ಚಿತ್ರಿಸಿದ್ದಾರೆ. ಅದೇ ಕುಟುಂಬದಲ್ಲಿ ಬೆಳ್ಳಿ ತನ್ನ ಕುಟುಂಬದ ಸದಸ್ಯರ ಅಗಲುವಿಕೆಯಿಂದ ಮತ್ತು ಗಂಡನ ಜೈಲು ವಾಸದಿಂದ ಎದೆಗುಂದದೇ ಬಂದ ಕಷ್ಟಗಳನ್ನು ಎದುರಿಸಿ ಬಾಳುವ ಧೀರತೆಯ ಪಾತ್ರವಾಗಿ ವಿವರಿಸಿರುವುದನ್ನು ಕಾಣಬಹುದು. ಅಲ್ಲದೆ, ಪ್ರಕೃತಿಯ ವರ್ಣನೆಯನ್ನು ಘಟನಾವಳಿಗಳಿಗೆ ಅನುಗುಣವಾಗಿ ವರ್ಣಿಸಿದ್ದಾರೆ.

"ಬಿಸಿಲು ಸತ್ತು ಮುಸ್ಸಂಜೆ ಹುಟ್ಟಿ ಮುಗಿಲ ತುಂಬ ಆ ಕೆಂಬೂದಿ ಚೆಲ್ಲಾಡಿತ್ತು. ಅಡಿವಿಗಿ ಹೋಗಿದ್ದ ಮಂದೆಲ್ಲಾ ನೆತ್ತಿಮ್ಯಾಲ ಹುಲ್ಲಿನ ಹೊರಿ, ಕಟಗಿ ಹೊರಿ, ಹೊತಗೊಂಡು ಮನೀಗಿ, ಹೊಳ್ಳಿ ಹೊಂಟಿದ್ದರು ದನಗೋಳು ದಂಪಾಧೂಳಿ ನೆಲಾ ತೋಳ್ಕೊತ ಊರಕಡಿ ನಡೆದಾಗ ರಸ್ತಾದ ಧೂಳೆಲ್ಲಾ ಮಂಜಿನಂಗೆ ಆಕಾಸಕ್ಕ ಡರಲಕತ್ತಿತ್ತು.

ರಾತ್ರಿ ಆಳವಾಗುತ್ತಲೇ ನಡೆದಿತ್ತು ಬೆಳದಿಂಗಳು ಮಬ್ಬಾಗುತ್ತಿತ್ತು. ಚಂದ್ರಾಮ ಪಡುವಣ ದಿಕ್ಕಿಗೆ ಇಳಿದಿದ್ದ" (ಬದುಕು, ಪು.೩೧೭) ಹೀಗೆ ಇನ್ನೂ ಅನೇಕ ಘಟನೆಗಳೊಂದಿಗೆ ಪ್ರಕೃತಿಯ ಸೌಂದರ್ಯದ ವರ್ಣನೆಗಳನ್ನು ಕಾದಂಬರಿಯಲ್ಲಿ ವರ್ಣಿಸಿದ್ದಾರೆ. ಬಾಕಿ ಕಾದಂಬರಿಯ ವಸ್ತುವಾಗಿ ಕಲ್ಬುರ್ಗಿನಗರದ ಮಾರುತಿ ಝೋಪಡಿ

ಪಟ್ಟಿಯ ಪ್ರದೇಶದಲ್ಲಿ ವಾಸಿಸುವ ಕೆಳವರ್ಗ ಕುಟುಂಬದ ಆಗು–ಹೋಗುಗಳನ್ನು ಮತ್ತು ಅವರ ಸುತ್ತಾ–ಮುತ್ತಾವಿರುವ ಮೇಲ್‌ವರ್ಗದ ಜನರ ರೀತಿ–ನೀತಿಗಳನ್ನು ಆಶಯವಾಗಿರಿಸಿಕೊಂಡು ಕಾದಂಬರಿಯನ್ನು ಹೆಣೆದಿದ್ದಾರೆ. ಕೆಳವರ್ಗದಲ್ಲಿ ಜನಿಸಿರುವ ಮಹಿಳೆ ವಿದ್ಯೆ ಎನ್ನುವುದು ಗಗನ ಕುಸುಮವಾಗಿದ್ದ ಕಾಲದಲ್ಲಿ ವಿದ್ಯೆಯನ್ನು ಕಲಿತು ಜಾಗೃತಳಾಗಿ ಕಛೇರಿ ಕೆಲಸವನ್ನು ಮಾಡುತ್ತಾ ಪದವಿ ಪಡೆದು, ಪ್ರೌಢಶಾಲಾ ಶಿಕ್ಷಕಿಯಾಗಿ, ಕಾಲೇಜು ಪ್ರಾಂಶುಪಾಲರಾಗಿ ಲೇಖಕಿಯಾಗಿ, ಸಾಧನೆ ಮಾಡಿದ ಮಹಿಳೆಯ ಬಾಲ್ಯ, ಹರೆಯ, ಮುಪ್ಪ, ಈ ಮೂರು ಮುಖ್ಯ ಹಂತಗಳಲ್ಲಿ ಅನುಭವಿಸಿದ್ದ ನೋವುಗಳನ್ನು ಎದುರಿಸಿದ ಸವಾಲುಗಳನ್ನು ಹೇಳಿದ್ದಾರೆ.

'ಬಾಕಿ' ಕಾದಂಬರಿಯು ಉತ್ತರ ಕರ್ನಾಟಕದ ಭಾಷೆಯ ಶೈಲಿಯನ್ನು ಮತ್ತು ಊಟೋಪಚಾರದ ವರ್ಣನೆಯನ್ನು ಮೂಡಿಸಿದ್ದಾರೆ. ಭಾಷೆಯ ಸೊಗಡು "ಸಾವಕಾಸ್ ಮಗಾ... ಗಡಬ್ಯಾಡ ಮಾಡಬ್ಯಾಡ ಬಿದ್ದಗಿದ್ದೀ... (ಬಾಕಿ ಪು. ೪) "ಊಹೊಂ... ಚಾಬ್ಯಾಡ್ ಮುತ್ತ್ಯಾ... ನಡಿ ಹೋಗಾಮಿ ಊರಿಗಿ... ಊಹುಂ... ದಣಿವಿಲ್ಲ ಮುತ್ತ್ಯಾ... ಈ ಲಂಬಾಣಿಗಿ ನೋಡಿ ಪಾಪ ಅನಸ್ತದೋ... ಈ ಕೆರೆಕಟ್ಟಿ ಇಕಿಗಿ ಕೊಲ್ಲೇ ಬಿಟ್ಟಾದಂತ ಹೇಳಿದೆಲ್ಲಾ, ನೀನೆ... ಪಾಪ... ಆಕಿನ ಹೊಟ್ಯಾಗ ಪಾಪು ಬ್ಯಾರೆ ಇತ್ತಂತ... (ಬಾಕಿ ಪು.೦೫) ಊಟೋಪಚಾರ. "ಏಳೆಂಟು ಬಿಳಿ ಜೋಳದ ರೊಟ್ಟಿಯ ಮೇಲೆ ಗಟ್ಟಿ ಬ್ಯಾಳಿ ಸೇಂಗಾದ ಹುಂಡಿ, ಕುದಿಸಿದ ನಾಕು ತತ್ತಿಗಳಿದ್ದವು. (ಬಾಕಿ ಪು. ೧೦)

'ನೀಲಮ್ಮತ್ತಿ ಭಜಿ ಕರೀತಾಳಂತ ಹಿಟ್ಟು ಕಲಿಸಿಟ್ಟಾಳ, ಗಂಗಮ್ಮತ್ತಿ ಬಾಳಕ ಖಂಡದ ತುಣಕ ಕುದಿಸಿ ಕಾರುಪ್ಪು ಹಚ್ಚಿ, ಎಣ್ಯಾಗ ಕರ್‍ದು, ಬಳ್ಳೊಳ್ಳಿ ಘಾಣ್ಯ ಕೊಟ್ಟು ತಾಳಸಿಟ್ಟಾಳ ತರ್‍ತಿನೀರು" (ಬಾಕಿ ಪು.೦೬)

ಈ ಎರಡು ಕಾದಂಬರಿಗಳಲ್ಲಿ ಕಾದಂಬರಿಕಾರ್ತಿ ಸರಳ ನೇರ ನಿರೂಪಣಾ ಶೈಲಿ ಅತ್ಯಂತ ವಿಶಾಲವಾದ ಕಥಾ ಭಿತ್ತಿಯನ್ನು ಹೆಣೆಯುವಲ್ಲಿ ಯಾವ ಆಡಂಬರವಿಲ್ಲ ಕಲಾತ್ಮಕ ಧ್ವನಿಪೂರ್ಣ ತಾಂತ್ರಿಕತೆಯ ಪ್ರಯತ್ನಗಳಿಲ್ಲ. ನೇರವಾಗಿ ದಲಿತ ಬದುಕಿನ ವಿವರಗಳನ್ನು ಬೇಸರ ಹುಟ್ಟಿಸದೇ ನಿರಸವೆನ್ನಿಸದೆ ಕಾದಂಬರಿಯನ್ನು ಹೆಣೆದಿದ್ದಾರೆ. ಕಾದಂಬರಿಗಳಿಗೆ ಯಶಸ್ಸು ಸಿಕ್ಕಿರುವುದು ಭಾಷೆಯಿಂದ ಅತ್ಯಂತ ವಿಸ್ತೃತ ಕಥಾವಸ್ತುವನ್ನು ನಿರ್ವಹಿಸಿರುವ ಭಾಷೆ, ಕಲ್ಬುರ್ಗಿ ಕನ್ನಡದ ದಲಿತರ ಬದುಕಿನ ಸೊಗಡು ಸಾರವೆಲ್ಲ ಕೆನೆಗಟ್ಟಿರುವ ಹಾಗೆ ಚಿತ್ರಿಸಿದ್ದಾರೆ.

ಕಾದಂಬರಿಕಾರ್ತಿ ಎರಡು ಕಾದಂಬರಿಗಳಲ್ಲಿ ಕೆಳವರ್ಗದ ಮಹಿಳಾ ಶೋಷಣೆಗಳ ಹಲವಾರು ಮಗ್ಗಲುಗಳನ್ನು ಶತ ಶತಮಾನಗಳಿಂದ ತುಳಿತಕ್ಕೆ ಒಳಗಾಗಿರುವವರ,

ಅಸ್ಪೃಶ್ಯರ, ನೊಂದವರ ಗ್ರಾಮೀಣ ಹೆಣ್ಣು ಮಕ್ಕಳ ಶೋಷಣೆ ಹೀಗೆ ಅನ್ಯಾಯ ಅನೀತಿಯ ಹಲವಾರು ಮಗ್ಗಲುಗಳನ್ನು ಅನಾವರಣಗೊಳಿಸಿದ್ದಾರೆ. ಊಳಿಗಮಾನ್ಯ ಪದ್ಧತಿ ದಲಿತ ಬಂಡಾಯ ಕಾದಂಬರಿಗಳ ಹಿನ್ನಲೆಯಲ್ಲಿರುವ ಶಕ್ತಿಯಾಗಿದೆ. ಸಾಮಾಜಿಕವಾಗಿ ಸಂಕ್ರಮಣಗೊಳ್ಳುತ್ತಿರುವ ಸಮಾಜವೇ ಅದರ ಕಥಾ ವಿನ್ಯಾಸದ ಕೇಂದ್ರದಲ್ಲಿದೆ.

'ಬದುಕು' ಮತ್ತು 'ಬಾಕಿ' ಕಾದಂಬರಿಗಳಲ್ಲಿ ಲೇಖಕಿ ಆಯ್ದುಕೊಂಡ ವಸ್ತುಗಳಲ್ಲಿ ಸಾಮ್ಯತೆ ಇರುವುದು ಕಂಡುಬರುತ್ತದೆ. ಸಮಾಜದ ಒಂದು ವರ್ಗದ ಸ್ವಾರ್ಥವನ್ನು ಪೋಷಿಸಲು ಹುಟ್ಟಿಕೊಂಡ ನಂಬಿಕೆಗಳು, ಆಚರಣೆಗಳು, ಅಥವಾ ಸಂಪ್ರದಾಯಗಳು ಕಾನೂನುಗಳು ಆ ಇಡೀ ಸಮಾಜದಲ್ಲಿ ಭಯ ಹಿಂಸೆ, ಘರ್ಷಣೆಗಳನ್ನು ಸತತವಾಗಿ ಸೃಷ್ಟಿಸುತ್ತಿರುತ್ತವೆ. ಯಜಮಾನಿಕೆ ಧೋರಣೆಯನ್ನು ಸಂಸ್ಕೃತಿ ಎಲ್ಲಾ ಕ್ಷೇತ್ರಗಳಲ್ಲಿ ತನ್ನ ಪರವಾದ ಸಂಚನ್ನು ನಡೆಸುತ್ತಿರುತ್ತದೆ. ತಾನು ಅನುಭವಿಸುತ್ತಿರುವ ಯಜಮಾನಿಕೆಯ ಸವಲತ್ತುಗಳು ತನ್ನ ಕೈ ತಪ್ಪಿ ಹೋಗಬಾರದೆಂಬ ಕಾರಣದಿಂದ ಸ್ವತಃ ಭಯಗೊಂಡು ಹಿಂಸಾತ್ಮಕ ಗುಂಪುಗಳನ್ನು ಬೆಳೆಸುತ್ತದೆ. ತಮ್ಮ ಯಜಮಾನಿಕೆಗೆ ಎದುರುಗೊಳ್ಳುವ ವರ್ಗದ ಬಲಿ ತೆಗೆದುಕೊಳ್ಳುವ ಸಂಚು ನಡೆಸುತ್ತವೆ. ಕೆಳವರ್ಗದ ಜನರೆಲ್ಲಾ ತಮ್ಮ ಕೈಕಾಲುಗಳ ಕೆಳಗೆ ಬಿದ್ದಿರಬೇಕೆಂದು ಆಶಿಸುತ್ತಾರೆ. ಇದಕ್ಕೆ ಪ್ರತಿಭಟನಾತ್ಮಕವಾಗಿ ಯಾರಾದರೂ ಕೆಳವರ್ಗದವರು ಸಿಡಿದು ನಿತಂರೆ, ಅವರನ್ನೇ ಬಲಿತೆಗೆದುಕೊಳ್ಳುವ ವ್ಯವಸ್ಥಿತ ಪಿತೂರಿ ಎನ್ನಬಹುದು. ಸದಾ ಶೋಷಣೆ, ಅನ್ಯಾಯ, ಅನೀತಿ, ಹಿಂಸಾತ್ಮಕ ಕೃತ್ಯಗಳು ನಡೆಯುತ್ತವೆ.

ಬದುಕು ಕಾದಂಬರಿಯಲ್ಲಿ ತುಳಜಾ ವ್ಯವಸ್ಥೆಯ ವಿರುದ್ಧವಾಗಿ ನಡೆದಿದ್ದರಿಂದಲೇ ಅವಳ ತಂದೆ ತಾಯಿ ವಾಸಿಸುತ್ತಿದ್ದ ಗುಡಿಸಲಿಗೆ ಬೆಂಕಿ ಹಚ್ಚಿ ಮಾಪುರ ತಾಯಿ ಕೊಟ್ಟ ಶಿಕ್ಷೆಯೆಂದು ಹೇಳಿ ಪಂಚಾಯ್ತಿಯಲ್ಲಿ ಅವರನ್ನು ಊರಿಂದ ಬಹಿಷ್ಕಾರ ಹಾಕುತ್ತಾರೆ. ಅದೇ ರೀತಿ 'ಬಾಕಿ' ಕಾದಂಬರಿಯಲ್ಲಿ ಶಾಂತಿ ತನಗೆ ಇಷ್ಟವಾದ ಶ್ರೀಕಾಂತನನ್ನು ಅಗ್ನಿ ಸಾಕ್ಷಿಯಾಗಿ ಮದುವೆಯಾಗಿದ್ದಕ್ಕೆ ಅವಳು ಕೆಲಸ ಮಾಡುತ್ತಿದ್ದ ಶಿಕ್ಷಣ ಸಂಸ್ಥೆಯವರು ಕೆಲಸದಿಂದ ವಜಾ ಮಾಡಿ ಹೊರಹಾಕುತ್ತಾರೆ.

ಹೀಗೆ ಎರಡು ಕಾದಂಬರಿಗಳನ್ನು ತೌಲನಿಕವಾಗಿ ವಿಶ್ಲೇಷಿಸಿದಾಗ ಬಹಳ ವಿಭಿನ್ನವಾದ ಮಹಿಳೆಯರ ಸಂವೇದನೆಗಳನ್ನು ಗುರುತಿಸಬಹುದಾಗಿದೆ. ಬಹುಮುಖ್ಯವಾಗಿ ಕಾದಂಬರಿಗಳಲ್ಲಿ ದುಡಿಯುವ ಕಾರ್ಮಿಕ ಮಹಿಳೆಯರ, ವಿದ್ಯಾವಂತ ಮಹಿಳೆಯರ, ದಲಿತ ಮುಗ್ಧ ಹೆಂಗಸರ ಪ್ರೀತಿ, ಪ್ರೇಮ, ಹಸಿವು, ಬಡತನ, ಮೂಢನಂಬಿಕೆಗಳ

ಮತ್ತು ಪುರುಷರ ಅತಿಯಾದ ಕಾಮ ತೃಷೆಗೆ ಕೆಳವರ್ಗದ ಮಹಿಳೆಯರು ಯಾವ ಯಾವ ರೀತಿ ಅನ್ಯಾಯಕ್ಕೆ ಬಲಿಯಾಗುತ್ತಾರೆ. ಎನ್ನುವುದನ್ನು ಎರಡು ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಅಂಶಗಳ ಆಧಾರದ ಮೇಲೆ ತೌಲನಿಕ ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಅಲ್ಲದೆ ಒಂದು ಅಲಕ್ಷಿತ ವರ್ಗದ ದನಿಯಾಗಿ, ಲೇಖನಿಯಾಗಿ, ಅದ್ಭುತ ವಾಸ್ತವತೆಯ ಕಲಾಕೃತಿಯಾಗಿ ಕಾದಂಬರಿಗಳು ರಚಿತವಾಗಿ ವಿಸ್ತಾರವಾದ ಭಿತ್ತಿಯ ಮೇಲೆ ಮಾನವ ಬದುಕಿನ ಕಷ್ಟ-ಸುಖಗಳನ್ನು ಹೃದಯ ಸ್ಪರ್ಶಿಯಾದ ಮನುಷ್ಯ ಸಂಬಂಧಗಳನ್ನು ಮೂಡಿಸುತ್ತಾ ಸಹೃದಯರ ಹೃದಯಗಳಲ್ಲಿ ಬದುಕಿನ ಅರಿವಿನ ಪ್ರಜ್ಞೆಯನ್ನು ವಿಸ್ತಾರಗೊಳಿಸುವ ಎಲ್ಲಾ ಮಗ್ಗಲುಗಳನ್ನು ಕಾದಂಬರಿಗಳಲ್ಲಿ ಹೆಣೆದಿರುವುದನ್ನು ಕಾಣಬಹುದು.

# ಅಧ್ಯಾಯ ಐದು

## ಬದುಕು ಮತ್ತು ಬಾಕಿ ಕಾದಂಬರಿಗಳಲ್ಲಿ ಕೆಳವರ್ಗದ ಸಮಸ್ಯೆ ಮತ್ತು ಸವಾಲುಗಳು

# ಅಧ್ಯಾಯ ಐದು

## ಬದುಕು ಮತ್ತು ಬಾಕಿ ಕಾದಂಬರಿಗಳಲ್ಲಿ ಕೆಳವರ್ಗದ ಸಮಸ್ಯೆ ಮತ್ತು ಸವಾಲುಗಳು

ಕಾದಂಬರಿಗಳಲ್ಲಿ ಸಮಸ್ಯೆಗಳು ಅಂತಾ ಬಂದಾಗ ಮುಖ್ಯವಾಗಿ ಅಸಮಾನತೆ ಅಸ್ಪೃಶ್ಯತೆ, ಮೇಲು ಕೀಳು, ಮೂಢನಂಬಿಕೆ ಅನಿಷ್ಟ ಪದ್ಧತಿಗಳು ಹೇಗೆ ಮಹಿಳೆಯರನ್ನು ಶೋಷಣೆಗೆ ಒಳಪಡಿಸುತ್ತವೆ. ಅವುಗಳು ಸಮಾಜದಲ್ಲಿ ಹೇಗೆ ಬೇರೂರಿವೆ. ಎಂಬುದನ್ನು ಕಾದಂಬರಿಗಳಲ್ಲಿ 'ಘಟನಾವಳಿಗಳನ್ನು ಒಳಗೊಂಡಂತೆ ಚಿತ್ರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ನಾವುಗಳು ಸಮಾಜದಿಂದ ಇವುಗಳನ್ನು ಹೇಗೆ? ಹೋಗಲಾಡಿಸಬೇಕು, ಅದಕ್ಕೆ ಪರಿಹಾರಗಳೇನು? ಎಂಬುದನ್ನು ಹುಡುಕುವುದೇ, ದೊಡ್ಡ ಸಮಸ್ಯೆ ಸವಾಲಾಗಿದೆ. ಅಸಮಾನತೆಗೆ ಉದಾಹರಣೆಯಾಗಿ, ಬದುಕು ಕಾದಂಬರಿಯಲ್ಲಿ ವ್ಯಕ್ತವಾಗಿರುವ ಈ ಕೆಳಗಿನ ಸಂದರ್ಭವೇ ಪ್ರಮುಖ ಉಲ್ಲೆಖವಾಗಿ ನೋಡಬಹುದು.

"ಸಾವಕಾರ ಗುರುಲಿಂಗಪ್ಪ ಜಮದಾರ ಮಲ್ಲಪ್ಪನಿಗೆ" ಯಾಕಲೆ ಮಲ್ಯಾ... ಸೊಕ್ಕ ಬಂದಾದೇನ್ಲೇ ಕಬ್ಬಲಿಗ್ಯಾ?" ಒದರ್‍ಯಾಡಿದ ಮಲ್ಲಪ್ಪನಿಗೆ ಏನು ತಿಳಿಯದೆ ಪಿಳಿ ಪಿಳಿ ಕಣ್ಣುಬಿಟ್ಟ ನಿಮ್ಮವ್ವನ ಸೂಳ್ಯಾ ಮಗನೇ ನಿನಗ... ಸಾವ್ಕಾರ ತನ್ನ ಬೈಗುಳನ್ನು ಜಾರಿಯಲ್ಲಿಟ್ಟ (ಬದುಕು ಪು.೧೦೪.)

ಸಾವ್ಕಾರ ಗುರುಲಿಂಗಪ್ಪ ಜಮದಾರ ಮಲ್ಲಪ್ಪನಿಗೆ ಬೈಯ್ಯುತ್ತಾನೆ. ಮಲ್ಲಪ್ಪನ ಮಗಳು ಕಾಶಮ್ಮ ಸಾವ್ಕರ ಗುರುಲಿಂಗಪ್ಪನ ಮಗ ಲಿಂಗರಾಜು ಪ್ರೀತಿಸಿರುತ್ತಾರೆ. ಇದನ್ನು ತಿಳಿದ ಸಾವ್ಕರ ಗುರುಲಿಂಗಪ್ಪ ಮಲ್ಲಪ್ಪನನ್ನು ಕರೆಯಿಸಿ ಈ ರೀತಿಯಾಗಿ ಬೈಯ್ಯುತ್ತಾನೆ. ಮಲ್ಲಪ್ಪನು ಗುರುಲಿಂಗಪ್ಪನ ಅಂತಸ್ತಿಗೆ ಸರಿಯಾಗಿಯೇ ಇದ್ದ ಕೆಳವರ್ಗದ ಜನರಿಗೆಲ್ಲ ಇವರೇ ನಾಯಕನಂತಿದ್ದರು. ಆದರೆ ಕೆಳಜಾತಿಯವರು ಎಂದು ಬಿಟ್ಟರೆ

ಸಾವ್ಕರನಿಗಿಂತ ಯಾವುದರಲ್ಲಿ ಕಡಿಮೆ ಇರಲಿಲ್ಲ. ಕೇವಲ ಜಾತಿಯ ನೆಪದಿಂದ ಮಲ್ಲಪ್ಪನಿಗೆ ಅವಮಾನ ಮಾಡುತ್ತಿರವುದನ್ನು ಇಲ್ಲಿ ಕಾಣಬಹುದು. ಮುಖ್ಯವಾಗಿ, ವ್ಯಕ್ತವಾಗುವ ಪ್ರಮುಖ ಅಂಶವೆಂದರೆ ಮೇಲ್ವರ್ಗದವರು ಕೆಳವರ್ಗದವರನ್ನು ನಡೆಸಿಕೊಳ್ಳುವ ರೀತಿ ಜಾತಿಯ ದಾಳ, ಮೇಲು ಕೀಳು ಎಂಬ ಭಾವನೆ ಅಧಿಕಾರದ ದರ್ಪ, ಹೀಗೆ ಅನೇಕ ಅಂಶಗಳೊಂದಿಗೆ, ಮೇಲ್ವರ್ಗ, ಕೆಳವರ್ಗ ಎಂಬ ಅಸಮಾನತೆಯ ಕರಿ ನೆರಳು ಇರುವುದು ಒಂದುಕಡೆಯಾದರೆ, ಅವುಗಳನ್ನು ಸಮಾಜದಿಂದ ಹೋಗಲಾಡಿಸುವುದು ಇನ್ನೊಂದು ಕಡೆ ಈ ರೀತಿಯಲ್ಲಿ ಸಮಸ್ಯೆಗಳು ಸವಾಲುಗಳು ಕಾದಂಬರಿಗಳಲ್ಲಿ ಪ್ರತಿಬಿಂಬಿತವಾಗಿವೆ. ಇದರ ಜೊತೆಗೆ ಇನ್ನೊಂದು ಪ್ರಮುಖ ಸವಾಲು, ಸಮಸ್ಯೆ ಎಂದರೆ ಅಸ್ಪೃಶ್ಯತೆ ಇದು ಸಮಾಜದಲ್ಲಿ ಹೇಗೆ ಗಟ್ಟಿಯಾಗಿ ಬೇರೂರಿದೆ ಎಂದರೆ, ಮೇಲ್ವರ್ಗದವರು ಕೆಳವರ್ಗದವರನ್ನು ಮುಟ್ಟಿಸಿಕೊಳ್ಳದೇ ಇರುವುದು ಒಂದುಕಡೆ, ಊಟೋಪಚಾರದ ಮೇಲಿನ ನಿರ್ಬಂಧ ಇನ್ನೊಂದು ಕಡೆ ಈ ರೀತಿಯಾಗಿ ಸಮಾಜದ ಸಮುದಾಯಗಳಲ್ಲಿ ಈಗಲೂ ಉತ್ತರಕರ್ನಾಟಕದ ಭಾಗದಲ್ಲಿ ಇರುವುದನ್ನು ಗುರುತಿಸಬಹುದು. ಇದಕ್ಕೆ ಇತ್ತಿಚೆಗೆ ನಡೆದ ಜ್ವಲಂತ ಉದಾಹರಣೆಯಾಗಿ ಜೋಗಣಿಯನ್ನಾಗಿ ಮಾಡಿರುವುದು. ಈ ರೀತಿಯಾದ ಘಟನೆಗಳು, ಈಗಲೂ ಸಹ ನಡೆಯುತ್ತಿರುವುದು ದುರದಷ್ಟಕರ, ಇದನ್ನು ಹೇಗೆ ಹೋಗಲಾಡಿಸುವುದು, ಎನ್ನುವುದೇ ಒಂದು ಸಮಸ್ಯೆ ಮತ್ತು ದೊಡ್ಡ ಸವಾಲಾಗಿದೆ. ಇವುಗಳಿಗೆ ಉದಾಹರಣೆಯಾಗಿ ಬಾಕಿ ಕಾದಂಬರಿಯಲ್ಲಿ ವ್ಯಕ್ತವಾಗಿರುವ ಅಸ್ಪೃಶ್ಯತೆಯ ನೆಲೆಯನ್ನು ಈ ರೀತಿಯಾಗಿ ಗುರುತಿಸಬಹುದು.

ಶಾಂತಿಗೆ ಬ್ರಾಹ್ಮಣ ಮಡಿ ಹೆಂಗಸು ಸುಂದ್ರಬಾಯಿ "ನಮ್ಮ ಹುಡ್ರ ಜೋಡಿ ಕೂಡಬ್ಯಾಡ... ದೂರ ಸರಿ ಆಕಾಡಿ ಅವರಿಗೆ ಮುಟ್ಟಗಿಟ್ಟ ನೋಡು ಹುಷಾರ್" (ಬಾಕಿ ಪು.೧೬೦) ಎಂದು ಎಳೆಯ ಮನಸ್ಸಿನ ಶಾಂತಿಗೆ ಗದರಿಸುತ್ತಿದ್ದಳು. ಕೆಳವರ್ಗದವರ ಸ್ಥಿತಿ ಹೇಗಿತ್ತು? ಎಂದರೆ ಪ್ರಾಣಿಗಳಿಗಿಂತ ಕೀಳಾಗಿ ಕಾಣುತ್ತಿದ್ದರು. ಮೇಲ್ವರ್ಗದ ಜನ ದಲಿತರಿಗೆ ಊಟ, ತಿಂಡಿ, ನೀರು ಏನಾದರು ಕೊಡುತ್ತಿದ್ದರೆ, ಮೇಲಿಂದ ಕೆಳಗೆ ಬಿಸಾಕುತ್ತಿದ್ದರು. ಅದನ್ನು ಇವರು ಕೆಳಗೆ ಬೀಳದಂತೆ ಹಿಡಿದುಕೊಳ್ಳಬೇಕಾಗಿತ್ತು. ಹೀಗೆ ಒಮ್ಮೆ ಸುಂದ್ರಿಬಾಯಿ ಶಾಂತಿಯನ್ನು ಕರೆದು ಪತ್ರೋಳೆ ಎಲೆಯಲ್ಲೋ ಬಾಳೆ ಎಲೆಯಲ್ಲೋ, ಬಿಳಿ ರದ್ದಿ ಪೇಪರನಲ್ಲೂ ಒಂದಿಷ್ಟು, ಉಪ್ಪಿಟ್ಟನ್ನು ಹಾಕಿ "ಏ ಶಾಂತೀ... ತಗೋ ಒಂದೀಟು ಉಪ್ಪಿಟ್ಟು ಉಳದಾದ ತಿನ್ನು... ಅಂತ ಕರೆಯುತ್ತಿದ್ದಳು. ಶಾಂತಿ ಎದ್ದು ಹೋಗಿ ಅವಳ ಮುಂದೆ ಬೋಗಸೆ ಒಡ್ಡಿ ನಿಂತರೆ ಆ ಮಡಿ ಹೆಂಗಸು ಮೇಲಿನಿಂದಲೇ ದೊಪ್ಪಂತ ಅದನ್ನು ಅವಳ ಬೊಗಸೆಗೆ ಹಾಕುತ್ತಿದ್ದಳು." (ಬಾಕಿ ಪು.೧೬೦) ಇಲ್ಲಿ

ಮಡಿ ಮೈಲಿಗೆ ಎನ್ನುವುದು ಹೇಗೆ ಗಾಢವಾಗಿ ಮೇಲ್ವರ್ಗದವರಲ್ಲಿ ಬೇರೂರಿತ್ತು. ಎಂದರೆ, ಅದರಿಂದ ಅವರು ಹೊರ ಬರಲು ಸಾಧ್ಯವಿಲ್ಲದಷ್ಟು ಪರಿಣಾಮ ಬೀರಿತ್ತು. ಇದನ್ನು ಮೇಲ್ವರ್ಗದವರಿಗೆ ತಿಳಿಸಿ ಅದರಿಂದ ಹೊರ ಬರುವಂತೆ ಹೇಳುವುದು ತುಂಬಾ ಕಷ್ಟಸಾಧ್ಯವಾಗಿತ್ತು.

ಜೊತೆಗೆ ಕೆಳವರ್ಗದ ಸಮಸ್ಯೆ ಸವಾಲು ಅಂತಾ ಬಂದಾಗ, ಬಡತನ ಮತ್ತು ಅಜ್ಞಾನ, ಪ್ರಮುಖ ಸಮಸ್ಯೆಯಾಗಿ ಗುರುತಿಸಬಹುದು. ಕೆಳವರ್ಗದ ಜನರಿಗೆ ಬಡತನ ಯಾವಾಗಲೂ ಅವರ ಬೆನ್ನಿಗೆ ಅಂಟಿಕೊಂಡಿರುತ್ತದೆ. ಅಲ್ಲದೇ ಇವರ ಅಜ್ಞಾನದಿಂದ, ಅತಿ ಹೆಚ್ಚು ಮಕ್ಕಳನ್ನು ಪಡೆದುಕೊಂಡು ಬಡತನದ ಬೇಗೆಯಲ್ಲಿ ನಲುಗುತ್ತಿರುವುದನ್ನು ಬದುಕು ಕಾದಂಬರಿಯಲ್ಲಿ ಬರುವ ಸನ್ನಿವೇಶಗಳನ್ನು ನೋಡಿದಾಗ ಗೊತ್ತಾಗುತ್ತದೆ. ಇದು ಈಗಲೂ ಈ ಭಾಗದಲ್ಲಿ ಕಂಡುಬರುವ ಪ್ರಮುಖ ಸಮಸ್ಯೆಯಾಗಿದ್ದು, ಇದನ್ನು ತೊಡೆದು ಹಾಕುವುದು. ಒಂದು ಗಂಭೀರ ಸವಾಲಾಗಿದೆ. ಇದಕ್ಕೆ ಉದಾಹರಿಸುವುದಾದರೆ, ಬದುಕು ಕಾದಂಬರಿಯಲ್ಲಿ ಮುಕುಡಪ್ಪನ ಅತಿ ಕಾಮುಕತನಕ್ಕೆ ಅವನ ಹೆಂಡತಿ ಕಲ್ಲವ್ವ ಬಲಿಯಾಗುತ್ತಾಳೆ. ಈ ಕೆಳಜಾತಿಯ ಜನರಲ್ಲಿ ಅತಿ ಕಾಮುಕತೆಯು ಒಂದು ಸಮಸ್ಯೆಯಾಗಿದೆ. ಇಂತಹ ಸಮಸ್ಯೆಗಳಿಗೆ ಬಲಿಯಾಗುವುದು ಮಾತ್ರ ಮಹಿಳೆಯರು ಎಂಬುದನ್ನು ಗುರುತಿಸಬಹುದು.

ಇಲ್ಲಿ ಮುಖ್ಯವಾಗಿ ಗಮನಿಸುವ ಅಂಶವೇನೆಂದರೆ, ಕೆಳವರ್ಗದ ಮಹಿಳೆಯರಿಗೆ ರಕ್ಷಣೆ ಎನ್ನುವುದೇ ಮುಖ್ಯ ಪ್ರಶ್ನೆಯಾಗಿದೆ. ಏಕೆಂದರೆ, ಕೆಳವರ್ಗದ ಮಹಿಳೆಯರು, ಪುರಾತನ ಕಾಲದಿಂದಲೂ ಶೋಷಣೆಗೆ ಒಳಪಡುತ್ತಿದ್ದಾರೆ. ಆದರೆ ಈ ಶೋಷಣೆ ಕೊನೆಗಾಣಿಸುವುದು ಹೇಗೆ ಎನ್ನುವುದೇ ದೊಡ್ಡ ಸಮಸ್ಯೆ ಏಕೆಂದರೆ ೧೯೭೦ರ ದಶಕದಲ್ಲಿ ಪ್ರಾರಂಭವಾಗಿದ್ದ ಸಾಹಿತ್ಯಿಕ ಸಾಮಾಜಿಕ, ವಾಗ್ವಾದಗಳು ಹಿಂದಿನದಕ್ಕಿಂತ ಬೇರೆಯಾಗಿದ್ದವು. ಹೊಸ ರೀತಿಯ ಸಮಸ್ಯೆಗಳಾದ, ವಾಕ್‌ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯದ ಸಂಗತಿಗಳು ಲೇಖಕಿಯರಿಗೆ ಮುಖ್ಯವಾಗಿದ್ದು. ಸ್ವಾತಂತ್ರ್ಯ ಮತ್ತು ಸಮಾನತೆಯ ಪ್ರಶ್ನೆಗಳನ್ನು ಪ್ರತಿಯೊಬ್ಬ ನಾಗರಿಕರು ಆಲೋಚಿಸುವಂತಹ ಸಂದರ್ಭ ಒದಗಿ ಬಂತು. ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿಯೂ ಸಮಾನತೆ ಹಾಗೂ ಸ್ವಾತಂತ್ರ್ಯ ಕೆಲವರಿಗೆ ಮಾತ್ರ ಎಂದೆನಿಸತೊಡಗಿತು. ವಾಸ್ತವದ ನೆಲೆಯಲ್ಲಿ ನೋಡಿದಾಗ, ಸ್ವಾತಂತ್ರ್ಯ ಮತ್ತು ಸಮಾನತೆ ಎನ್ನುವುದು ಕೆಳವರ್ಗದ ಜನರಿಗೆ ಮರೀಚಿಕೆಯಾಗಿದೆ.

ಕೆಳವರ್ಗದವರಲ್ಲಿ ಕಂಡುಬರುವ ಅನಿಷ್ಟ ಪದ್ಧತಿ ಅಥವಾ ಮೂಢನಂಬಿಕೆ ಎಂದರೆ ಜೋಗಣಿ ಬಿಡುವ ಪದ್ಧತಿ ಈ ಪದ್ಧತಿ ಕೆಳಜಾತಿ ಜನರಿಗೆ ಶಾಪವಾಗಿ

ಪರಿಣಮಿಸಿದೆ. ಈ ಸಂಪ್ರದಾಯದ ನೆಪದಲ್ಲಿ ಕೆಳಜಾತಿಯ ಹೆಂಗಸರನ್ನು ಚೆಲುವಿಗೆ ಮಾರುಹೋಗಿ ಅವರನ್ನು ಹರೆಯದ ದಿನಗಳಲ್ಲಿ ಬಳಸಿಕೊಂಡು ಆ ಮೇಲೆ ಬಿಸಾಡಿ ಬಿಡುವ ಮೇಲ್ಜಾತಿ ಗಂಡಸರು ಅವರು ಕೊಡುವ ದುಡ್ಡಿಗೆ ಆಸೆ ಬಿದ್ದು ಅವರು ಹೇಳಿದಂತೆ ಕೇಳುವ ಕೆಳಜಾತಿಯವನೇ ಆದರೂ ಅವರ ಕೈಗೊಂಬೆಯಾಗಿ ನಡೆದುಕೊಳ್ಳುವ ಈ ಅನಿಷ್ಠ ಪದ್ಧತಿಯನ್ನು ಸಮಾಜದಲ್ಲಿ ಉತ್ತರ ಕರ್ನಾಟಕದ ಭಾಗದಲ್ಲಿ ಜೀವಂತವಾಗಿರುವುದನ್ನು ಗುರುತಿಸಬಹುದು. ಪ್ರಮುಖ ಉದಾಹರಣೆಯಾಗಿ ಇತ್ತೀಚೆಗೆ ನಡೆದ ಒಂದು ಘಟನೆ, ಅದೇನೆಂದರೆ ಇತ್ತೀಚೆಗೆ ಆ ಕುಟುಂಬ ಸಮಾಜದ ಬಗೆಗಿನ ಜ್ಞಾನ ತಿಳುವಳಿಕೆ ಇಲ್ಲದ ಹದಿಹರೆಯದ ಹೆಣ್ಣುಮಗುವನ್ನು ಜೋಗಣಿಯನ್ನಾಗಿ ಮಾಡಿಸಿದ್ದು. ಈ ರೀತಿಯಾದ ಅನಿಷ್ಠ ಪದ್ದತಿಗಳು ಎರಡು ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಪಾತ್ರಗಳನ್ನು ಘಟನೆಗಳನ್ನು ಅವಲೋಕಿಸಿದಾಗ, ಅದರ ಜೀವಂತಿಕೆಯ ನೈಜತೆಯ ವಾಸ್ತವದ ನೆಲೆಗಳಲ್ಲಿ ಗುರುತಿಸಬಹುದಾಗಿದೆ. ಉದಾಹರಣೆಯಾಗಿ ಬದುಕು ಕಾದಂಬರಿಯಲ್ಲಿ ಕಂಡುಬರುವ ಚಿಂಚೂರು ಮಾಪುರ ತಾಯಿಯ ಅಂದರೆ ದೇವರ ಹೆಸರಿನಲ್ಲಿ ಮುಗ್ಧ ಹೆಣ್ಣು ಮಕ್ಕಳನ್ನು ಜೋಗಣಿಯನ್ನಾಗಿ ಮಾಡಿ ಹಣೆಪಟ್ಟಿ ಕಟ್ಟಿ, ಸೂಳೆಗಾರಿಕೆಯ ಹೆಸರಿನಲ್ಲಿ ಶೋಷಣೆ ಮಾಡುವ ಪ್ರವೃತ್ತಿಯನ್ನು ಕಾಣಬಹುದು. ಈ ವ್ಯವಸ್ಥೆಯಲ್ಲಿ ಸಮಾಜದಿಂದ ತೊಡೆದು ಹಾಕುವುದು ಒಂದು ಕಡೆಯಾದರೆ, ಅದರ ಬಗೆಗಿನ ಜ್ಞಾನ, ತಿಳುವಳಿಕೆ ನೀಡುವಲ್ಲಿನ ಸಮಸ್ಯೆ ಇನ್ನೊಂದು ಕಡೆ, ಈ ರೀತಿಯಾದ ಸಮಸ್ಯೆಗಳು ಕಾದಂಬರಿಗಳಲ್ಲಿ ಕಾಣಬಹುದು.

ಕೆಳಜಾತಿಯ ಮಹಿಳೆಯರ ಮತ್ತೊಂದು ಸಮಸ್ಯೆ ಎಂದರೆ, ಧಾರ್ಮಿಕ ಆಚರಣೆಗಳು, ಈ ಧಾರ್ಮಿಕ ಆಚರಣೆಗಳಲ್ಲಿ ಮಹಿಳೆ ಭಾಗವಹಿಸುವಿಕೆಯಲ್ಲಿಯೂ ಸಹ ನಿರ್ಬಂಧವನ್ನು ಕಾಣಬಹುದು. ಬದುಕು ಕಾದಂಬರಿಯನ್ನು ವಿಶ್ಲೇಷಿಸಿದಾಗ ಜೋಗಣಿಯಾಗಿರುವ ಮಹಿಳೆ ಕೊನೆಯವರೆಗೂ ಆ ದೇವರ ಸೇವೆ ಮಾಡುತ್ತಾ ಹಾಡುಗಳನ್ನು ಹಾಡುತ್ತಾ, ಭಿಕ್ಷೆ ಬೇಡುತ್ತಾ, ಜೀವನವನ್ನು ನಡೆಸಬೇಕಾಗುತ್ತದೆ. ಅಲ್ಲದೇ ಇನ್ನೊಂದು ಪ್ರಮುಖ ಸಮಸ್ಯೆ ಎಂದರೆ, ದೇವರ ಹೆಸರಿನಲ್ಲಿ ಬೆತ್ತಲೆ ಸೇವೆ ಸಲ್ಲಿಸುವುದು. ಇದೊಂದು ಗಂಭೀರ ಸಮಸ್ಯೆ ಏಕೆಂದರೆ ಈ ಉತ್ತರ ಕರ್ನಾಟಕದ ಭಾಗದಲ್ಲಿ ಈಗಲೂ ಜಾತ್ರೆ ಸಮಯದಲ್ಲಿ ನಡೆಯುವ ಈ ಅನಿಷ್ಟ ಪದ್ಧತಿಯನ್ನು ಕಾಣಬಹುದು. ಅಲ್ಲದೇ ಬೇವಿನ ಹುಟ್ಟಿಗೆ ಮತ್ತು ಗಂಧದ ಹುಟ್ಟಿಗೆ ಇದನ್ನು ಮೈಗೆ ಕಟ್ಟಿಕೊಂಡು ಹಲಗೆ ಬಾಜಿ, ಭಜಂತ್ರಿ, ಡೊಳ್ಳುಗಳನ್ನು ಬಾರಿಸುತ್ತ ಮೆರವಣಿಗೆ ನಡೆಸುವುದರ ಮೂಲಕ ಕುರಿ ಬಲಿಕೊಡುವ ವ್ಯವಸ್ಥೆಯನ್ನು ಈ ಸಮಾಜದಲ್ಲಿ ಕಾಣಬಹುದು.

ದೇವರಿಗೆ ಹರಕೆಯ ಹೋರುವ ವಿವಿಧ ವಿಧಗಳನ್ನು ನೋಡಿದಾಗ ಸಮಾಜದಲ್ಲಿ ಎಷ್ಟೊಂದು ಮೌಢ್ಯತೆ ತಲೆದೂರಿದೆ. ಎಂಬುದನ್ನು ಕಾದಂಬರಿಯಲ್ಲಿ ವ್ಯಕ್ತವಾಗಿರುವ ವಿಷಯವಸ್ತು ಅಥವಾ ಪಾತ್ರಗಳ ಮೂಲಕ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದಾಗಿದೆ. ಇಲ್ಲಿ ಮುಖ್ಯವಾಗಿ ಕೆಳವರ್ಗದವರ ಇಂತಹ ಅನಿಷ್ಟ ಆಚರಣೆಗಳು ಅವರನ್ನು ಮತ್ತಷ್ಟು ಮೌಢ್ಯರನ್ನಾಗಿ ಮಾಡಿ ಅನಾಗರಿಕರಂತೆ ಸಮಾಜದಲ್ಲಿ ಬದುಕುತ್ತಾರೆ. ಕೆಳರ್ಗದವರ ಇಂತಹ ಆಚರಣೆಗಳು ಮೇಲ್ವರ್ಗದವರಿಗೆ ಪುಕ್ಕಟೆ ಮನೋರಂಜನೆ ಯಾಗುತ್ತವೆ. ಇಂತಹ ಸಂದರ್ಭದಲ್ಲಿ ಕೆಳಜಾತಿಯ ಮಹಿಳೆಯರನ್ನು ಕೇವಲ ಲೈಂಗಿಕ ಹಿತಾಸಕ್ತಿಯಂತೆ ನೆಡೆಸಿಕೊಳ್ಳುತ್ತಾರೆ. ಜಾತ್ರೆಗಳಲ್ಲಿ ಈ ವರ್ಗದ ಹೆಣ್ಣು ಮಕ್ಕಳನ್ನು ದನ, ಕುರಿಗಳನ್ನು ಸಂತೆಯಲ್ಲಿ ಹರಾಜು ಮಾಡುವ ಹಾಗೆ, ಅವರವರ ದೇಹದ ಆಕೃತಿಯ ಮೇಲೆ ಅವರಿಗೆ ಹಣಕೊಟ್ಟು ತಮ್ಮ ಕಾಮ ತೃಷೆಯನ್ನು ಈಡೇರಿಸಿಕೊಳ್ಳುತ್ತಾರೆ. ಇದಕ್ಕೆ ಸ್ವತಃ ಕೆಳವರ್ಗದ ಜನರೇ ಅನುಕೂಲ ಮಾಡಿಕೊಡುತ್ತಾರೆ ಎನ್ನುವುದು. ವಿಷಾಧನೀಯ ಸಂಗತಿಯಾಗಿದೆ. ಇಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ಅವರಲ್ಲಿರುವ ಅಜ್ಞಾನ, ಜೊತೆಗೆ ಅವರಲ್ಲಿರುವ ಮೂಢನಂಬಿಕೆಯಂತಹ ಅನಿಷ್ಟ ಪದ್ಧತಿಗಳು ಕಾರಣಗಳಾಗಿವೆ.

ಕೆಳವರ್ಗದವರ ಹಬ್ಬ ಹರಿದಿನಗಳು, ಜಾತ್ರೆ, ಹರಕೆಗಳು ಸೇವೆಗಳು ಯಾವಾಗಲೂ ಕಾಮಕ್ಕೆ ತಳುಕು ಹಾಕಿಕೊಂಡ ಆಚರಣೆಗಳಾಗಿರುತ್ತವೆ. ಎಂಬುದು ಗಮನಿಸಬೇಕಾದ ಅಂಶ. ಇಂತರಹ ಆಚರಣೆಗಳೆಲ್ಲವು ಮೇಲ್ವರ್ಗದವರ ಕುತಂತ್ರ ಸ್ವಹಿತಾಸಕ್ತಿಗಳೇ ಆಗಿರುತ್ತವೆ. ಈ ಅನಿಷ್ಟ ಪದ್ಧತಿಗಳಿಗೆ ಬಲಿಯಾಗುವವರು ಮಾತ್ರ ಕೆಳವರ್ಗದ ಹೆಣ್ಣುಮಕ್ಕಳೇ ಈ ಜೋಗಣಿಯಾಗುವ ಕ್ರೂರ ಪದ್ಧತಿಯನ್ನು ತಡೆಯಲು ಸರಕಾರ ಎಷ್ಟೇ ಕಾರ್ಯಕ್ರಮಗಳನ್ನು ಜಾರಿಗೆ ತಂದರೂ ಅವುಗಳನ್ನು ಸಂಪೂರ್ಣವಾಗಿ ನಿಲ್ಲಿಸಲು ಆಗುತ್ತಿಲ್ಲ. ಏಕೆಂದರೆ ಈ ಜನರಲ್ಲಿ ಆಚರಣೆಯೆಂಬುದು ದೇವರಿಗೆ ಸೇವೆ ಸಲ್ಲಿಸುವ ಕಾರ್ಯವಾಗಿ ಮನಸ್ಸಿನಲ್ಲಿ ಉಳಿದುಬಿಟ್ಟಿದೆ. ಹಾಗಾಗಿ ತೆರೆಮರೆಯಲ್ಲಿ ಜೋಗಣಿಯಂತಹ ಆಚರಣೆಗಳು ಜೀವಂತವಾಗಿ ನಡೆಯುತ್ತಲೇ ಇವೆ. ಹೆಚ್ಚಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಇವತ್ತಿಗೂ ಜೀವಂತವಾಗಿದೆ. ಈ ಕೆಳಜನಾಂಗದವರು ಯಾವಾಗಲೂ ಬಡತನದಿಂದಲೇ ನರಳುತ್ತಿರುತ್ತಾರೆ. ಏಕೆಂದರೆ ಇವರಿಗೆ ಯಾವುದೇ ಸ್ವಂತ ಮನೆಯಾಗಲೀ, ಭೂಮಿಯಾಗಲಿ ಇರುವುದಿಲ್ಲ. ಒಂದು ವೇಳೆ ಇದ್ದರೂ ಅವರ ಅಜ್ಞಾನದಿಂದ, ಅತೀ ಕುಡಿತದಿಂದ ಮೇಲ್ವರ್ಗದವರಿಗೆ ಕೊಡುವುದುಂಟು. ಇದನ್ನೇ ಮೇಲ್ವರ್ಗದವರು ಇವರ ಅಜ್ಞಾನ ಕುಡಿತವನ್ನೇ ಬಂಡವಾಳವಾಗಿಟ್ಟುಕೊಂಡು ತಮ್ಮ ಆಳುಗಳಾಗಿ ದುಡಿಯುವಂತೆ ಮಾಡಿಕೊಳ್ಳುತ್ತಾರೆ. ಆದ್ದರಿಂದಲೇ ಶತ ಶತಮಾನಗಳಿಂದಲೂ ಈ ಕೆಳವರ್ಗದ ಜನರು ಜೀತಪದ್ಧತಿ, ಮಲಹೋರುವ ಪದ್ಧತಿ, ಜಮೀನ್ದಾರಿ ಪದ್ಧತಿ, ದೇವದಾಸಿ

ಪದ್ಧತಿಯಂತಹ ಅನಿಷ್ಟ ಪದ್ಧತಿಗಳಿಂದ ಮುಕ್ತಿಹೊಂದಲು ಆಗದೇ ಅಂಧಕಾರದಲ್ಲಿ ಮುಳುಗಿರುವುದನ್ನು ಕಾಣುತ್ತೇವೆ.

ಕಾದಂಬರಿಕಾರ್ತಿಯವರೇ ಹೇಳಿದಂತೆ "ನನ್ನ ಹಾಗೂ ನನ್ನಂತವರು ಹುಟ್ಟಿ ಬೆಳೆದ ಅನುಭವಿಸಿದ ಬದುಕಿನ ಹಲವು ಹದಿನೆಂಟು ಮುಖವಾಡಗಳನ್ನು ಕಿತ್ತೆಸೆದು ಅವುಗಳ ಹಿಂದಿರುವ ಮೇಕಪ್ಪಿಲ್ಲದ ಮಾರಿಗಳಿಗೆ ಭೂತಗನ್ನಡಿ ಹಿಡಿಯುವ ಸಾಚಾ ಕಳಕಳಿಯ ಪ್ರಾಮಾಣಿಕ ಪ್ರಯತ್ನ" (ಬದುಕು ಪು. X) ಅವರ ಕಾದಂಬರಿಗಳಲ್ಲಿ ಮೇಳೈಸಿದ್ದಾರೆ. ಮನುಷ್ಯ ಕಾಳಜಿಯ ಸಂವೇದನೆ ಲೇಖಕಿಯವರ ಕೃತಿಯ ಆಶಯವಾಗಿದೆ. ಕನ್ನಡದ ಗದ್ಯ ಪ್ರಕಾರಕ್ಕೆ ಬೆತ್ತಲಾದ ಬದುಕಿನ ನಿಜ ಚಿತ್ರಣಗಳನ್ನು ನೀಡಿ ಮಹಿಳೆಯರ ಮೇಲೆ ನಡೆಯುವ ವಿವಿಧ ಶೋಷಣೆಗಳನ್ನು ತೆರೆದಿಟ್ಟಿದ್ದಾರೆ. ಸಮಾಜದಲ್ಲಿ ನಡೆಯುವಂತಹ ಕೆಳವರ್ಗದ ಜನರ ಮೇಲೆ ಸಮಾಜ ಹಾಗೂ ಬದುಕಿನ ಶೂದ್ರತನ, ಬಡತನ, ಅಸಾಹಯಕತೆ, ಅನಕ್ಷರತೆ, ವ್ಯವಸ್ಥೆಯ ಕೌರ್ಯ ಇವುಗಳಿಂದ ಈ ಜನಾಂಗದ ಮಹಿಳೆಯರು ರೋಸಿಹೋಗಿದ್ದಾರೆ.

ದಲಿತ ದುಡಿಯುವ ಮಹಿಳೆಯರ ಮೇಲೆ ನಿರಂತರ ದೌರ್ಜನ್ಯಗಳು ನಡೆಯುತ್ತಲೇ ಇರುವುದನ್ನು ಕಾಣಬಹುದು. ಯಾವುದೇ ಒಬ್ಬ ಮಹಿಳೆ ಗಂಡನ ಮನೆಯಲ್ಲಿ ತನ್ನ ಅಸ್ತಿತ್ವವನ್ನು ಕಾಣುವುದು ತನ್ನ ಮಕ್ಕಳನ್ನು ಹೆತ್ತು ಅವರನ್ನು ವಂಶ ಉದ್ಧಾರಕರನ್ನಾಗಿ ಮಾಡಿದಾಗ ಮಾತ್ರ ಗಂಡನ ಮನೆಯಲ್ಲಿ ಅವಳಿಗೆ ಜಾಗವಿರುತ್ತದೆ. ಆದರೆ ಅವಳಿಗೆ ಮಕ್ಕಳಾಗದೇ ಹೋದರೆ, ಅವಳ ಬಾಳು ನಿರುಪಯುಕ್ತ ಎಂದು ಟೀಕಿಸುತ್ತಾರೆ. ಅಂತಹದ್ದೇ ಒಂದು ಪಾತ್ರವನ್ನು ಲೇಖಕಿ ಬದುಕು ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಅಂದರೆ ಸಮಾಜವು ಮಹಿಳೆಗೆ ಗಂಡು ಸಂತಾನ ಆಗದೇ ಹೋದಾಗ ಅವರನ್ನು ನೋಡುವ ದೃಷ್ಟಿಕೋನ, ಕಾಣುವ ಹಾಗೂ ನಡೆಸಿಕೊಳ್ಳುವ ರೀತಿ ಹೇಗಿರುತ್ತದೆ ಎಂದರೆ ಅವಳ ಬದುಕಿದ್ದು ಸತ್ತ ಹಾಗೆ, ದಿನ ನಿತ್ಯವು ದೌರ್ಜನ್ಯಕ್ಕೆ ಒಳಗಾಗುವ ಪ್ರವೃತ್ತಿಯನ್ನು ಕಾಣಬಹುದಾಗಿದೆ. ಈ ರೀತಿಯಾದ ದೃಷ್ಟಿಕೋನ ಸಮಾಜದಲ್ಲಿ ಯಾವಾಗ ಬದಲಾಗುತ್ತೋ ಅಂದು ಈ ಸಮಸ್ಯೆ ಬದಲಾಗುತ್ತದೆ.

ಮಹಿಳೆಯರು ತಮ್ಮ ಸಂಸಾರಕ್ಕಾಗಿ ಎಷ್ಟೇ ಕಷ್ಟ–ಪಟ್ಟುದುಡಿದರೂ ಮಹಿಳೆಗೂ ದುಡಿಮೆಗೂ ಬಹುದೂರ "ಅವಳ ದುಡಿಮೆಯನ್ನು ಗಂಡಸಿಗೆ ಹೋಲಿಸಲಾಗುತ್ತದೆ. ಮಹಿಳೆಯರ ದಿನವಿಡಿಯ ದುಡಿಮೆ ದುಡಿಮೆಯೇ ಅಲ್ಲ ಅರ್ಥಶಾಸ್ತ್ರದಂತೆ ಉತ್ಪಾದನೆ ಮಾರಾಟ, ಮತ್ತು ಲಾಭಗಳು ದುಡಿಮೆ ಎನ್ನಿಸುತ್ತವೆ. ಮಹಿಳೆಯರ ಮನೆಗೆಲಸ ದುಡಿಮೆಯಾಗದೆ ಸೇವಾ ವಲಯಕ್ಕೆ ಸೇರುತ್ತದೆ. ಮಹಿಳೆಯ ಮನೆ ಹೊರಗಿನ

ದುಡಿಮೆಯನ್ನು ಗಂಡಸಿನಂತೆ ಎಂದು ಗುರುತಿಸಿ ಅದೃಶ್ಯಗೊಳಿಸಲಾಗುತ್ತದೆ. ಹೆಣ್ಣು ದುಡಿದು ಗಳಿಸಿದರೂ ಅದನ್ನು ಹೆಣ್ಣು ತನದಲ್ಲಿ ಗುರುತಿಸದೆ ಗಂಡು ಲಕ್ಷಣವಾಗಿಯೇ ಗುರುತಿಸುವುದು ಪಿತೃ ಸಂಸ್ಕೃತಿಯ ದಟ್ಟ ಪ್ರಭಾವದ ದ್ಯೂತಕವಾಗಿ ಕಾಣುತ್ತದೆ. ಮಹಿಳೆಯರು ಕುಟುಂಬ ಮತ್ತು ವಿವಾಹದ ಚೌಕಟ್ಟಿನಲ್ಲಿ ಒಟ್ಟು ಅಸ್ತಿತ್ವವನ್ನು ನಿರಾಕರಿಸಲಾಗಿದೆ ಈ ಎರಡು ಸಂಸ್ಥೆಗಳಿಗೆ ಹೆಣ್ಣು ಕೇವಲ ಒಂದು ಉಪಕರಣ ಅವಳು ವ್ಯವಸ್ಥೆ ನಿಯಂತ್ರಿಸುವ ಯಜಮಾನನ ಇಷ್ಟಕ್ಕೆ ಉಪಯೋಗವಾಗುವ ಉಪಕರಣವಾಗಿದ್ದಾಳೆ." (ಪು.೧೧೭ ಮಹಿಳಾ ಅಧ್ಯಯನ ಸಂ.ಸ.೦೭)

ಮಾಪುರ ತಾಯಿಯ ಹೆಸರಿನಲ್ಲಿ ದಲಿತ ಜನಾಂಗದವರಲ್ಲಿ ಇರುವ ಬೆತ್ತಲೆ ಸೇವೆ ಜೋಗಣಿ ಪದ್ಧತಿಯ ಆಚರಣೆ, ದೇವಿಯ ಹೆಸರಿನಲ್ಲಿ ಸೂಳೆಗಾರಿಕೆಯ ಪದ್ಧತಿ ಆ ಜೋಗಣಿಯರ ಬದುಕನ್ನೇ ನಾಶಮಾಡುತ್ತದೆ. ಈ ಜೋಗಣಿ ಮಹಿಳೆಯರು ತಮಗೆ ಇಷ್ಟವಿಲ್ಲದಿದ್ದರೂ ಸೂಳೆಗಾರಿಕೆ ಮಾಡಿ. ಬೀದಿ, ಬೀದಿಗಳಲ್ಲಿ ಭಿಕ್ಷೆಯನ್ನು ಬೇಡಿ ಜೀವನವನ್ನು ನಡೆಸುತ್ತಾರೆ. ಆದರೆ ಅವರ ಹರೆಯ ಕಾಲದಲ್ಲಿ ಏನೂ ಕಷ್ಟವೆನಿಸದಿದ್ದರೂ ಮುಪ್ಪಿನ ಕಾಲದಲ್ಲಿ ಜೋಗಣಿಯರ ಜೀವನ ಬಹಳ ಕಷ್ಟಕರವಾಗಿರುತ್ತದೆ. ಮುಪ್ಪಿನ ಕಾಲದಲ್ಲಿ ಅವರ ಮಕ್ಕಳಾಗಲಿ, ಗಂಡನಾಗಲಿ, ಇವರ ಜೊತೆ ಇರುವುದಿಲ್ಲ. ಇವರ ಮಕ್ಕಳಿಗೆ ತಂದೆಯೆ ಇಲ್ಲದೇ ಅನಾಥರಾಗಿ ತಮ್ಮ ಜೀವನದ ನೆಲೆಯನ್ನು ಕಂಡುಕೊಳ್ಳಲು ಮುಂದಾಗುತ್ತಾರೆ. ಮುಪ್ಪಿನ ತಾಯಿಯನ್ನು ಯಾರು ಉಪಚರಿಸುವುದಿಲ್ಲ. ಜೋಗಣಿಯರು ಒಬ್ಬ ಗಂಡಸರಿಗಿಂತ ಹೆಚ್ಚು ಗಂಡಸರೊಂದಿಗೆ, ಲೈಂಗಿಕ ಸಂಪರ್ಕ ಹೊಂದುವುದರಿಂದ ಇವರಿಗೆ ಬಹಳ ಬೇಗ ಸೋಂಕುಗಳು ತಗಲುತ್ತವೆ. ಕ್ಯಾನ್ಸರ್, ಏಡ್ಸ್‌ನಂತಹ ಮಹಾಮಾರಿ ರೋಗಗಳು ಜೀವನ ಪೂರ್ತಿ ಭಾದಿಸುತ್ತವೆ. ಜೋಗಣಿಯರನ್ನು ಉಪಚರಿಸಲು ಸೇವೆ ಮಾಡಲು ಯಾರೂ ಮುಂದೆ ಬಾರದೇ ಅವರ ಸ್ಥಿತಿ ಶೋಚನೀಯವಾಗಿರುತ್ತದೆ. ಜೋಗಣಿ ಮಹಿಳೆಯರು ತಮ್ಮ ಅನಾರೋಗ್ಯದ ಸ್ಥಿತಿಯಲ್ಲಿ ಗುಣಮಟ್ಟದ ಚಿಕಿತ್ಸೆ ಪಡೆಯಲು ಸಾಧ್ಯವಾಗುವುದಿಲ್ಲ. ಏಕಂದರೆ ಅವರ ಬಳಿ ಹಣದ ಕೊರತೆಯಿರುತ್ತದೆ.

ಬದುಕು ಕಾದಂಬರಿಯಲ್ಲಿ ಜಮಾದರ ಮಲ್ಲಪ್ಪನ ಮಗ ಕಲ್ಯಾಣಿ ಕೊಲೆ ಆರೋಪದ ಮೇಲೆ ಜೈಲಿಗೆ ಹೋಗುತ್ತಾನೆ. ಹದಿನಾಲ್ಕು ವರ್ಷ ಜೈಲು ಶಿಕ್ಷೆ ಮುಗಿಸಿಕೊಂಡು ಮರಳಿ ಊರಿಗೆ ಬಂದಾಗ, "ಊರಿನ ಪಂಚಾಯತಿಗೆ ಕಲ್ಯಾಣಿಯನ್ನು ಕರೆಯಿಸಿ ನೀ ಜೇಲ ಖಾನ್ಯಾಗ ಸಜಾ ಬೋಗಸಿ ಬಂದಿದ್ದಿ ಅಲ್ಲಿ ಜೈಲಿನ್ಯಾಗ ತುರಕರು, ತೊಂಟರು, ಕಿರಿಸಾನರು ಅಂತ ಕುಲಾ ಅಲ್ಲದ ಸಣ್ಣ ದೊಡ್ಡ ಜಾತಿ ಮಂದಿರ್ತಾರ ಅಲ್ಲೇನು ಕುಲಾಯಿಲ್ಲಾ ಜಾತಿಯಿಲ್ಲಾ, ನೀ ಅವರದರಾಗ ಕಲ್ತು ಉಂಡು ತಿಂದು

ಕುಲಗೆಟ್ಟಿದ್ದಿ! ಮೈಲಿಗಿ ಮಾಡ್ಕೊಂಡು ಬಂದಿದ್ದೀ" (ಬದುಕು ಪು.೪೫೯) ಎಂದು ಕಲ್ಯಾಣಿಗೆ ಎಂಟುನೂರಾ ಒಂದು ರೂಪಾಯಿಯನ್ನು ದಂಡ ಹಾಕಿ ಊರಿನ ಪಂಚರಿಗೆಲ್ಲಾ ಮಾಂಸದ ಊಟ ಹಾಕಿಸಬೇಕು ಎಂದು ತೀರ್ಮಾನ ಹೇಳುತ್ತಾರೆ. ಮತ್ತೆ ಕಲ್ಯಾಣಿಯನ್ನು ತಮ್ಮ ಕುಲಕ್ಕೆ ಸೇರಿಸಿಕೊಳ್ಳಲು ಸೂಜಿ ಕೋಲಿನಿಂದ ಇವನ ನಾಲಿಗಿ ತುದೀಗಿ ಚುಟಗಿ ಕೂಡ್ತಾರ. ಈ ರೀತಿಯಾಗಿ ಆಚರಣೆಗಳ ಮೂಲಕ ಕಲ್ಯಾಣಿಯನ್ನು ಶುದ್ಧ ಮಾಡಿದರು. ಈ ರೀತಿಯ ವ್ಯವಸ್ಥೆಯನ್ನು ಅಂದರೆ ಜಾತಿಯ ಅಸಮಾನತೆ ಮಡಿ-ಮೈಲಿಗೆ ಎನ್ನುವುದು ಹೇಗೆ ಇನ್ನೂ ಜೀವಂತಿಕೆ ಇದೆ ಎಂಬುದನ್ನು ತಿಳಿದುಕೊಳ್ಳಲು ಸಾಧ್ಯವಾಗಿದೆ.

ಹೀಗೆ ಈ ಎರಡು ಕಾದಂಬರಿಗಳಲ್ಲಿ ಕಂಡುಬರುವ ಕೆಳವರ್ಗದ ಸಾಮಾಜಿಕ ಸಮಸ್ಯೆಗಳು ಅಂತಾ ಬಂದಾಗ ಕಾದಂಬರಿಗಳಲ್ಲಿ ಲೇಖಕಿಯು ಪಾತ್ರಗಳ ಮೂಲಕ ನೈಜ ಸಮಸ್ಯೆಗಳನ್ನು ಸಮಾಜಕ್ಕೆ ಕಣ್ಣಿಗೆ ಕಟ್ಟುವ ಹಾಗೇ ಚಿತ್ರಿಸಿರುವುದನ್ನು ಕಾಣಬಹುದು.

# ಅಧ್ಯಾಯ ಆರು

## ಸಮಾರೋಪ

ಗೀತಾನಾಗಭೂಷಣ ಅವರ ಎರಡು ಕಾದಂಬರಿಗಳನ್ನು ಅನುಲಕ್ಷಿಸಿ ಅಧ್ಯಯನ ಮಾಡಿದಾಗ ಇವುಗಳಲ್ಲಿ ಕಂಡುಬರುವ ಅನೇಕ ಮಹಿಳಾ ಸಂವೇದನೆಯ ಅಂಶಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಮುಖ್ಯವಾಗಿ ಈ ಕಾದಂಬರಿಗಳಲ್ಲಿ ವ್ಯಕ್ತವಾಗಿರುವ ಉತ್ತರ ಕರ್ನಾಟಕ ಭಾಗದ ಮಹಿಳೆಯರ ಜ್ವಲಂತ ಸಮಸ್ಯೆಗಳನ್ನು ಯಥಾವತ್ತಾಗಿ ಪ್ರತಿಬಿಂಬಿಸಿರುವ ಅಂಶಗಳನ್ನು ಕಾಣಬಹುದು. ಜೊತೆಗೆ ಕಾದಂಬರಿಗಳಲ್ಲಿ ಗ್ರಾಮೀಣ ಭಾಗದ ಜನರಲ್ಲಿ ಇಂದಿಗೂ ತಳವೂರಿರುವ ಅಜ್ಞಾನ ಮೂಢನಂಬಿಕೆಗಳು, ಅನಿಷ್ಠ ಸಂಪ್ರದಾಯಗಳು, ಆಚರಣೆಗಳು ಹೇಗೆ ಅಸ್ತಿತ್ವದಲ್ಲಿವೆ ಎಂಬುದನ್ನು ವಾಸ್ತವದ ನೆಲೆಯಲ್ಲಿ ಕಾಣಿಸಿರುವುದನ್ನು ಗುರುತಿಸಬಹುದು. ಅಸ್ಪೃಶ್ಯತೆ, ಅಸಮಾನತೆ, ಬಡತನ, ಕಷ್ಟ-ನೋವು ಇನ್ನೂ ಸಮಾಜಿಕ ಅನಿಷ್ಠ ಪದ್ದತಿಗೆ ಕೆಳವರ್ಗದ ಮಹಿಳೆಯರು ಹೇಗೆ ಸಿಲುಕಿ ನರಳುತ್ತಿದ್ದಾರೆ. ಎನ್ನುವುದನ್ನು ತಿಳಿದುಕೊಳ್ಳುವುದರ ಮೂಲಕ, ಸರಳ ನಿರೂಪಣಾ ಶೈಲಿಯೊಂದಿಗೆ ನೇರವಾಗಿ ದಲಿತ ಬದುಕಿನ ಹಾಗೂ ಮಹಿಳಾ ಶೋಷಣೆಯ ಅಂಶಗಳ ವಿವರವನ್ನು ನೀಡುತ್ತಾ ಹೋಗುತ್ತಿರುವುದರಿಂದ ಬೇಸರ ತರಿಸದೆ ಸರಾಗವಾಗಿ ಒದಗಿಸಿಕೊಂಡು ಹೋಗುವ ಕಾದಂಬರಿಗಳಾಗಿವೆ.

ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಎದುರಿಸುವ ಅನುಭವಿಸುವ ನೋವುಗಳನ್ನು ಶೋಷಣೆಗಳನ್ನು ಪುರುಷ ಪ್ರಧಾನ ಸಾಮಾಜಿಕ ವ್ಯವಸ್ಥೆಯೇ ರೂಪಿಸಿರುವಂತಹ ವರ್ಗ, ಲಿಂಗ, ಕುಟುಂಬ, ವಿವಾಹ ದಾಂಪತ್ಯಗಳಲ್ಲಿ ಹೆಣ್ಣನ್ನು ನಡೆಸಿಕೊಳ್ಳುವ ರೀತಿ ಮತ್ತು ಹೆಣ್ಣಿನ ಪ್ರತಿಕ್ರಿಯೆಯನ್ನು ತಿಳಿಯುವುದರ ಜೊತೆಗೆ ಮಹಿಳೆಯರು ಸಮಾಜದಲ್ಲಿ ನಡೆಯುವಂತಹ ಅನಿಷ್ಠ ಆಚರಣೆಗಳ ವಿರುದ್ಧ ಮತ್ತು ಮತ್ತು ಅಸ್ತಿತ್ವವನ್ನು ಕಂಡುಕೊಳ್ಳುವಲ್ಲಿ ಪಡುವಂತಹ ಪ್ರಯತ್ನ ಹಾಗೂ ಮೇಲ್ವರ್ಗದ

ಪುರುಷರು ಕೆಳವರ್ಗದ ಮಹಿಳೆಯರನ್ನು ಮತ್ತು ಪುರುಷರನ್ನು ಯಾವ ರೀತಿ ನಡೆಸಿಕೊಳ್ಳುತ್ತಾರೆ ಎಂಬುದನ್ನು ಮೇಲ್ಜಾತಿಯವರ ಅಂತಸ್ತಿಗೆ ಸಮಾನ ಅಂತಸ್ತು ಹೊಂದಿದ್ದರೂ ಸಹ ಜಾತಿಯ ನೆಪಯೊಡ್ಡಿ ಪ್ರಾಣಿಗಳನ್ನು ನಡೆಸಿಕೊಳ್ಳುವ ರೀತಿಯಲ್ಲಿ ನಡೆಸಿಕೊಳ್ಳುವ ಬಗೆಯನ್ನು ಕಂಡುಕೊಳ್ಳಲಾಗಿದೆ.

ಸಮಾಜ ರೂಪಿಸಿರುವಂತಹ ವರ್ಗ, ಲಿಂಗ ಕುಟುಂಬ, ದಾಂಪತ್ಯ ವಿವಾಹಗಳೆಲ್ಲದರಲ್ಲಿಯೂ ಹೆಣ್ಣು ಶೋಷಿತಳೇ ಆಗಿದ್ದು. ಮೇಲ್ವರ್ಗದಿಂದ ಮಾತ್ರವೇ ಹೆಣ್ಣಿನ ಶೋಷಣೆಯಾಗುತ್ತಿಲ್ಲ ಅದರ ಜೊತೆಗೆ ತನ್ನ ವರ್ಗದವನೇ ಆದ ಪುರುಷನಿಂದಲೂ ಆಕೆ ಶೋಷಿತಳಾಗಿದ್ದಾಳೆ, ಸ್ತ್ರೀಗೆ ಮಾತ್ರವೇ ಶೋಷಣೆಯಲ್ಲ. ಪುರುಷನು ಅಧೀನ ವರ್ಗದಿಂದ ಶೋಷಿತನಾಗಿದ್ದಾನೆ. ಮೇಲ್ವರ್ಗದ ಗೌಡ, ಸಾವ್ಕಾರ, ಕುಲಕರ್ಣಿ ಮತ್ತು ಕೆಳವರ್ಗದವನೇ ಆದ ಪೂಜಾರಿ ಇವುಗಳೆಲ್ಲದರಿಂದರ ಕುತಂತ್ರದಿಂದ ಕೆಳಗವರ್ಗದ ಹದಿ ಹರೆಯದ ಹೆಣ್ಣುಮಕ್ಕಳು ಜೋಗಣಿಯಂತಹ ಅನಿಷ್ಟ ಪದ್ಧತಿಗೆ ಬಲಿಯಾಗುವ, ಹದಿ ಹರೆಯ ಹೆಣ್ಣು ಮಕ್ಕಳು ಎಲ್ಲರಂತೆ ಒಬ್ಬ ಗಂಡನಿಗೆ ಗರತಿಯಾಗಿ ಬಾಳಬೇಕು ಎಂಬ ಕನಸ್ಸುಗಳನ್ನು ಕಟ್ಟಿಕೊಂಡಿದ್ದರು, ತಂದೆ-ತಾಯಿಗಳು ಪೂಜಾರಿಯ ಒತ್ತಾಯದ ಮೇರೆಗೆ ತಮ್ಮ ಹೆಣ್ಣು ಮಕ್ಕಳನ್ನು ಜೋಗಣಿಯಾಗಿ ಬಿಡುವ ಹರಕೆಯನ್ನು ನೆರವೇರಿಸುತ್ತಾರೆ. ಇದರಿಂದ ಜೋಗಣಿಯಾಗಿ ಸೂಳೆಗಾರಿಕೆ ಮಾಡಲು ಇಷ್ಟವಿಲ್ಲದೇ ಪ್ರೀತಿಸಿದ ವ್ಯಕ್ತಿಯನ್ನು ಸೇರಲಾರದೇ ಆತ್ಮಹತ್ಯೆ ಮಾಡಿಕೊಳ್ಳುವ ಮಹಿಳೆಯರ ದುರಂತ ವ್ಯಥೆಯನ್ನು ಕಾದಂಬರಿಗಳಲ್ಲಿ ವ್ಯಕ್ತವಾಗಿರುವುದನ್ನು ಕಾಣಬಹುದು.

ಅಂತರ್ಜಾತಿ ವಿವಾಹ ಮತ್ತು ಪುನರ್ ವಿವಾಹಕ್ಕೆ ಅವಕಾಶಗಳು ಇಲ್ಲದಿರುವುದನ್ನು ಕಾಣುತ್ತೇವೆ. ಮೇಲ್ವರ್ಗದ ಸ್ತ್ರೀಯರು ವಿಧವೆಯಾದರೆ, ಅವರು ತಲೆ ಬೋಳಿಸಿಕೊಂಡು ಕೆಂಪು ಸೀರೆ ಉಟ್ಟು ಮೂಲೆಯಲ್ಲಿ ಕೂಡುವುದನ್ನು ಕಾಣಬಹುದು. ಅಲ್ಲದೇ ಕೆಳವರ್ಗದ ಸ್ತ್ರೀಯರು ವಿಧವೆಯರಾದರೆ ಮತ್ತು ವಿಚ್ಛೇದನೆ ಪಡೆದರೆ ಬೇರೆ ಪುರುಷನೊಂದಿಗೆ ಕೂಡಿಕೊಳ್ಳುವ ಅವಕಾಶವಿತ್ತೆ ವಿನಃ ಮದುವೆ ಆಗುವ ಅವಕಾಶವಿರಲಿಲ್ಲ. ಇಂತಹ ಎಲ್ಲಾ ಸಂಪ್ರದಾಯಗಳನ್ನು ಮೀರುವ 'ಸ್ತ್ರೀ'ಯರನ್ನು ಕಾದಂಬರಿಗಳಲ್ಲಿ ಚಿತ್ರಿಸಿರುವುದು ಬದಲಾವಣೆಯ ಹಾದಿಯಲ್ಲಿ ಮುಂದುವರೆಯುವ ಪ್ರಯತ್ನದ ಅಂಶಗಳನ್ನು ಕಂಡುಕೊಳ್ಳಲಾಗಿದೆ. ಮಹಿಳೆಯರಿಗೆ ಜೋಗಣಿ ಎನ್ನುವ ಹಣೆಪಟ್ಟಿ ಕಟ್ಟಿ ತಮ್ಮ ಮಗ್ಗಲುಗಳನ್ನು ಬಿಸಿ ಮಾಡಿಕೊಳ್ಳುವ ಹುನ್ನಾರ ನಡೆಯುತ್ತಿತ್ತು. ಇಂತಹ ಜೋಗಣಿಯಾಗಿದ್ದ ಮಹಿಳೆ ಎಲ್ಲಾ ದಂದೆಯನ್ನು ಬಿಟ್ಟು ಬೇರೆ ಮದುವೆಯಾಗಿದ್ದರೆ, ಮೇಲ್ವರ್ಗದವರಿಗೆ ಸಹಿಸಲು ಆಗದೇ ಮತ್ತೆ ಅವರ ಉಪಭೋಗಗಳಿಗೆ ಮುಂದಿನ ತಮ್ಮ ತಲೆಮಾರಿನವರಿಗೆ ಇಂತಹ ಅವಕಾಶಗಳು ಕೈ ತಪ್ಪಬಹುದು ಎನ್ನುವ ಹುನ್ನಾರದಿಂದ ಜೋಗಣಿ ಪದ್ಧತಿಯು ಜೀವಂತಿಕೆಯನ್ನಾಗಿ ಇಡುವ ವ್ಯವಸ್ಥೆಯ ಹುನ್ನಾರವನ್ನು ಕಾಣಬಹುದು. ತೀರ ಕೆಳವರ್ಗದ

ಮಹಿಳೆಯೊಬ್ಬಳು ಅವತ್ತಿನ ಕೂಳನ್ನು ಅವತ್ತೇ ದುಡಿದು ತಿನ್ನುವ ಬಡತನವನ್ನು ಕಾಣುತ್ತೇವೆ. ಅಲ್ಲದೇ ಕೆಳವರ್ಗದ ಜನರಿಗೆ ಶಿಕ್ಷಣ ಮರೀಚಿಕೆಯಾಗಿದ್ದ ಕಾಲದಲ್ಲಿ ಶಿಕ್ಷಣ ಪಡೆಯುವ ಮಹಿಳೆಯರ ದಿಟ್ಟತನದ ಅಂಶಗಳನ್ನು ಕಾಣುವ ಮೂಲಕ ಮಹಿಳೆಯರು ಜಾತಿಯ ದಾರಿದ್ರ್ಯದಿಂದ ಬಡತನದಿಂದ ಬಾಲ್ಯದಲ್ಲಿ ಸಾಕಷ್ಟು ನೋವುಗಳನ್ನು ಅನುಭವಿಸಿರುವ ಅನೇಕ ಕರಾಳತೆಯ ಅಂಶಗಳನ್ನು ತಿಳಿಸಿಕೊಡುತ್ತವೆ.

ಕಾದಂಬರಿಗಳಲ್ಲಿ ಕೆಳಜಾತಿಯ ಜನರ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು, ಜೀವನದ ರೀತಿ ನೀತಿಗಳು ಮೊದಲಾದವುಗಳೆಲ್ಲ ಚಿತ್ರಿತವಾಗಿವೆ. ಇಲ್ಲಿ ಲೇಖಕಿ ಮೂಢನಂಬಿಕೆಗಳನ್ನು ಹೇಳುವುದರ ಜೊತೆ–ಜೊತೆಯಲ್ಲಿಯೇ ವೈಚಾರಿಕ ನೆಲೆಯಲ್ಲಿ ಓರೆ ಹಚ್ಚುವ ಕೆಲಸವನ್ನು ಮಾಡಿದ್ದಾರೆ. ಈ ಜನರ ದೌರ್ಬಲ್ಯಗಳು ಗಟ್ಟಿತನಗಳು, ಪ್ರೀತಿ, ಪ್ರೇಮ, ಹಾದರ, ಕಳವು, ಸುಳ್ಳು ಮೊದಲಾದ ಹಲವು ಹದಿನೆಂಟು ರೀತಿ ನೀತಿಗಳಲ್ಲಿ ಮಾನವೀಯ ನೆಲೆಗಳನ್ನು ತೆರೆದಿಡುವುದಷ್ಟೇ ಅಲ್ಲ ಅವಕ್ಕೊಂದು ಅಸ್ಮಿತೆಯಲ್ಲಿ ಕಲ್ಪಿಸಿಕೊಟ್ಟು ಸಾಂಸ್ಕೃತಿಕವಾಗಿ ಮಹತ್ವವನ್ನು ನಿರ್ಮಿಸುವ ಕೆಲಸ ಕಾದಂಬರಿಗಳಲ್ಲಿ ಕಾಣುತ್ತೇವೆ.

ಕಾದಂಬರಿಗಳಲ್ಲಿ ಬಳಕೆಯಾಗಿರುವ ಭಾಷೆ ಶೈಲಿ, ಭಾಷೆಯು ಅಲ್ಲಿನ ಪ್ರಾದೇಶಿಕ ನೆಲೆಗಟ್ಟಿನ ಭಾಷೆಯಲ್ಲೇ ಬಳಕೆಯಾಗಿದ್ದು, ಅಶ್ಲೀಲವೆನಿಸದೇ ಹಸಿಹಸಿಯಾದ ಜೀವಂತ ಚಿತ್ರಣ ಕೊಡುವ ಮೂಲಕ ಅಲ್ಲಿನ ಜನರ ಬದುಕಿಗೂ ಮತ್ತು ಭಾಷೆಗೂ ಇರುವ ಅವಿನಾಭಾವ ಸಂಬಂಧವನ್ನು ಕಟ್ಟಿಕೊಟ್ಟಿದ್ದಾರೆ. ಪ್ರಾದೇಶಿಕ ಭಾಷೆಯಲ್ಲಿಯೇ ಅವರಿಗೆ ಅರ್ಥವಾಗುವ ರೀತಿಯಲ್ಲಿಯೇ ಅಲ್ಲಿಯ ಮಹಿಳೆಯರ ಶೋಷಣೆಯ ವಿವಿಧ ಮಗ್ಗಲುಗಳ ಆಯಾಮಗಳನ್ನು ಮನಮುಟ್ಟುವ ಹಾಗೇ ಹೆಣೆದಿರುವ ಅಂಶಗಳನ್ನು ಕಂಡುಕೊಳ್ಳಲಾಗಿದೆ.

ಮಹಿಳೆಯರ ಮನಸ್ಸು ಬಹಳ ಸೂಕ್ಷ್ಮವಾಗಿರುತ್ತದೆ. ಅವರ ಮನಸ್ಸಿಗೆ ಇಷ್ಟವಿಲ್ಲದ ಕೆಲಸವನ್ನು ಯಾರಾದರೂ ಮಾಡಿದರೆ ಅದನ್ನು ಸಹಿಸಿಕೊಳ್ಳಲು ಆಗುವುದಿಲ್ಲ. ಅದರಲ್ಲಿ ಅವರು ಪ್ರೀತಿಸಿದ ಪುರುಷನನ್ನಾಗಲಿ, ಅಥವಾ ಮದುವೆಯಾದ ಗಂಡನನ್ನಾಗಲಿ, ದೂರ ಮಾಡಿದರೆ ಅಥವಾ ತನ್ನ ಗಂಡ ಪರ ಸ್ತ್ರೀಯರ ಸಂಗಮಾಡಿದರೆ ವ್ಯವಸ್ಥೆಯ ವಿರುದ್ಧ ಸಂಘರ್ಷಕ್ಕೆ ಇಳಿಯುತ್ತಾರೆ. ಅದೇ ರೀತಿಯಾಗಿ ವ್ಯವಸ್ಥೆಯ ಆಚರಣೆಯಲ್ಲಿರುವ ಮಹಿಳೆಯರ ಶೋಷಣೆಯ ನೆಲೆಗಳಲ್ಲಿ ಉಂಟಾಗುವ ನೋವಿನಿಂದ ಪಾರಾಗಲು ವ್ಯವಸ್ಥೆಯನ್ನು ವಿರೋಧಿಸುತ್ತಾಳೆ ವ್ಯವಸ್ಥೆಯಲ್ಲಿರುವ ದೊಡ್ಡ ಮನುಷ್ಯರು ಎನಿಸಿಕೊಳ್ಳುವವರ ಹುಳುಕುಗಳನ್ನು ಬಯಲಿಗೆಳೆಯುವ ಪ್ರಯತ್ನ ಮಾಡಿರುವ ಅಂಶಗಳನ್ನು ಕಂಡುಕೊಳ್ಳಲಾಗಿದೆ. ಮಹಿಳೆಯರು ಅನುಭವಿಸಿರುವ ಅನುಭವಿಸುತ್ತಿರುವ ಅನೇಕ ಸಾಮಾಜಿಕ ಸಮಸ್ಯೆಗಳ ಅರಿವು ತಿಳಿಸಿಕೊಡುವಲ್ಲಿ, ವಾಸ್ತವದ ಪ್ರಪಂಚದಲ್ಲಿ ಮಹಿಳೆಯರು ಹೇಗೆ ಶೋಷಣೆಗಳಿಂದ ಮುಕ್ತರಾಗಬೇಕು ಎನ್ನುವ ಅಂಶಗಳನ್ನು ತಿಳಿಸಿಕೊಡುವುದರ

ಜೊತೆಗೆ ದೇಶಿತನದಿಂದ ಒಂದು ಸಂಸ್ಕೃತಿಯು ಬೆಳೆಯಬೇಕಾದರೆ ಅದು ಜನಾಂಗದಿಂದ ಅನಾವರಣಗೊಳ್ಳುತ್ತದೆ. ಕೆಳಜಾತಿ ಜನರ ಬದುಕಿನ ವಿವರಗಳನ್ನು ಕಾದಂಬರಿಯುದ್ದಕ್ಕೂ ತಂದಿರುವುದು ಸೃಜನಶೀಲ ಬರವಣಿಗೆಗೆ ಸಾಕ್ಷಿಯಾಗಿದೆ. ಕಾದಂಬರಿಗಳು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ರಚನೆಯಾಗಿರುವುದರಿಂದ ಪುರುಷ ಪಾತ್ರಗಳನ್ನು ಸಮಯ, ಸಂದರ್ಭಗಳಿಗೆ ಅನುಗುಣವಾಗಿ ಚಿತ್ರಿಸುವ ಮೂಲಕ ಮಹಿಳಾ ಸಂವೇದನೆಯ ಅಂಶಗಳನ್ನು ಗುರುತಿಸಿ, ಕಾದಂಬರಿಗಳ ಮುಂದುವರಿಕೆಯಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ತೋರಿಸಿರುವ ನೆಲೆಗಳನ್ನು ತಿಳಿದುಕೊಳ್ಳಬಹುದು. ಅಲ್ಲದೇ, ಗ್ರಾಮೀಣ ಪರಿಸರದಲ್ಲಿ ಕಂಡಂತಹ ಘಟನೆಗಳು, ಅನ್ಯಾಯ, ಅಕ್ರಮಗಳು, ಮೂಢನಂಬಿಕೆಗಳು, ಬಡತನ, ಅಜ್ಞಾನ, ಅಂದಕಾರ, ಶೋಷಣೆ, ದಾರಿದ್ರ್ಯತನ ಇನ್ನೂ ಮೊದಲಾದವುಗಳನ್ನು ಚಿತ್ರಿಸುವ ಮೂಲಕ ವಾಸ್ತವದಲ್ಲಿಯೂ ಕಂಡುಬರುವ ಈ ರೀತಿಯ ಸಾಮಾಜಿಕ ಸಮಸ್ಯೆಗಳ ಜೀವಂತಿಕೆಯನ್ನು ದಾಖಲಿಸಿ, ಸಮಾಜಕ್ಕೆ ತಿಳಿಸುತ್ತಾ ಅವರ ನೋವಿಗೆ ಧ್ವನಿಯಾಗುವ ಅನೇಕ ಅಂಶಗಳನ್ನು ಕಾದಂಬರಿಗಳ ಮೂಲಕ ಕಂಡುಕೊಳ್ಳಲಾಯಿತು. ಶಿಕ್ಷಣ ಪಡೆದ ಮಹಿಳೆಯರು ಸಹ ಪುರುಷರ ದೌರ್ಜನ್ಯಕ್ಕೆ ಹೊರತಲ್ಲ ಎಂಬುದನ್ನು ತಿಳಿಯುವುದರ ಜೊತೆಗೆ ಜೀವನದಲ್ಲಿ ಸುಖ-ಬಂದಾಗ ಹಿಗ್ಗದೆ, ಕಷ್ಟಬಂದಾಗ ಕುಗ್ಗದೆ ಜೀವನದಲ್ಲಿ ಸಮತೋಲನ ಕಾಯ್ದುಕೊಂಡು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಬಗೆಯನ್ನು ತಿಳಿದುಕೊಳ್ಳಲಾಯಿತು. ಕಾದಂಬರಿಗಳಲ್ಲಿ ಆಧುನಿಕ ಕಾಲಕ್ಕನುಗುಣವಾಗಿ ನಡೆಯುವ ಶೋಷಣೆಗಳನ್ನು ವಸ್ತುವನ್ನಾಗಿರಿಸಿಕೊಂಡು ವಾಸ್ತವಾದ ನೆಲೆಗಳಲ್ಲಿ ಪ್ರತಿಬಿಂಬಿಸಿರುವುದನ್ನು ಕಾಣಬಹುದಾಗಿದ್ದು, ಸಹಜತೆ, ಸ್ವಭಾವೋಕ್ತಿಯ ಗುಣಗಳನ್ನು ಅವರು ಸೃಷ್ಟಿಸಿರುವ ಸಂಭಾಷಣೆಯ ಮೂಲಕ ಕಂಡುಕೊಳ್ಳಲಾಗಿದೆ.

**ಮುಂದಿನ ಅಧ್ಯಯನದ ಸಾಧ್ಯತೆಗಳು**

೧. ಗೀತಾನಾಗಭೂಷಣರವರ ಸಮಕಾಲೀನ ಲೇಖಕಿಯರ ಕಾದಂಬರಿಗಳ ಜೊತೆ ಇವರ ಕಾದಂಬರಿಗಳನ್ನು ತೌಲನಿಕವಾಗಿ ಅಧ್ಯಯನ ಕೈಗೊಳ್ಳುವುದು.

೨. ಉತ್ತರ ಕರ್ನಾಟಕ ಭಾಗದಲ್ಲಿರುವ ಮೂಢನಂಬಿಕೆಗಳು, ಜೋಗಣಿ ಪದ್ಧತಿಗಳ ಕುರಿತು, ಗೀತಾನಾಗಭೂಷಣರವರ ಕಾದಂಬರಿಗಳಲ್ಲಿ ಹೇಗೆ ಮೂಡಿಬಂದಿವೆ ಎನ್ನುವ ಬಗ್ಗೆ ಪ್ರತ್ಯೇಕ ಅಧ್ಯಯನಗಳನ್ನು ಕೈಗೊಳ್ಳುವುದು.

೩. ಗೀತಾನಾಗಭೂಷಣರವರು, ಇತರೇ ಲೇಖಕಿಯರಿಗಿಂತಲೂ, ಸಾಹಿತ್ಯಿಕ ದೃಷ್ಟಿಕೋನಗಳಲ್ಲಿ ಹೇಗೆ ಭಿನ್ನರಾಗಿದ್ದಾರೆ ಎಂಬುದರ ಕುರಿತು ಅಧ್ಯಯನ ಕೈಗೊಳ್ಳುವುದು.

ಅನುಬಂಧ–೧

## ಶ್ರೀಮತಿ ಗೀತಾನಾಗಭೂಷಣ ಅವರ ವ್ಯಕ್ತಿಪರಿಚಯ

| | | |
|---|---|---|
| ಹೆಸರು | : | ಶ್ರೀಮತಿ ಗೀತಾನಾಗಭೂಷಣ |
| ವಿಳಾಸ | : | ಕಾವ್ಯಶ್ರೀ<br>ಪ್ಲಾಟ್ ನಂ. ೧೮, ಸ್ವಸ್ತಿಕ್ ಲೇ ಔಟ್, ಸೇಡಂ ರೋಡ್ (ಬಿಲಗುಂದಿ ತೋಟ) ಗುಲ್ಬರ್ಗಾ–೫೮೫೧೦೫ |
| ಜಾತಿ | : | ಗಂಗಾಮತ (ತಳವಾರ) |
| ಹುಟ್ಟೂರು | : | ಗುಲ್ಬರ್ಗಾ ಜಿಲ್ಲೆಯ ಸಾವಳಗಿ ಗ್ರಾಮ |
| ತಂದೆ–ತಾಯಿ | : | ಶಾಂತಪ್ಪ–ಶರಣಮ್ಮ |
| ವಿದ್ಯಾಭ್ಯಾಸ | : | ಎಂ.ಎ.ಬಿ.ಈಡಿ |
| ವೃತ್ತಿ | : | ನಿವೃತ್ತ ಪ್ರಾಂಶುಪಾಲರು, ಶ್ರೀನಗರೇಶ್ವರ ಸಂಯುಕ್ತ ಕಿರಿಯ ಮಹಾವಿದ್ಯಾಲಯ, ನೆಹರೂಗಂಜ, ಗುಲ್ಬರ್ಗಾ |
| ಪ್ರವೃತ್ತಿ | : | ಓದುವುದು, ಕಥೆ, ಕಾದಂಬರಿಗಳನ್ನು ಬರೆಯುವುದು. |
| ಅನುವಾದ | : | 'ಹಸಿಮಾಂಸ ಮತ್ತು ಹದ್ದುಗಳು' ಮರಾಠಿ ಭಾಷೆಗೆ ಅನುವಾದಗೊಂಡಿದೆ. ತೆಲುಗು, ತಮಿಳು ಭಾಷೆಗಳಲ್ಲಿ ಇವರ ಕಥೆಗಳು ಅನುವಾದಗೊಂಡಿವೆ. |
| ಆಕಾಶವಾಣಿ | : | ಸುಮಾರು ೫೦ ಕಥೆಗಳು ಮತ್ತು ೧೫ ನಾಟಕಗಳು ಗುಲ್ಬರ್ಗಾ, ಧಾರವಾಡ, ಮೈಸೂರು, ಬೆಂಗಳೂರು, ಆಕಾಶವಾಣಿಯಿಂದ ಪ್ರಸಾರವಾಗಿವೆ. |
| ಚಲನಚಿತ್ರ | : | 'ಹೆಣ್ಣಿನಕೂಗು' ಎಂಬ ಹೆಸರಿನಲ್ಲಿ ಹಸಿಮಾಂಸ ಮತ್ತು ಹದ್ದುಗಳು ಕಾದಂಬರಿ ಚಲನಚಿತ್ರವಾಗಿದೆ. |
| ಪಠ್ಯಪುಸ್ತಕ | : | 'ಬದುಕು' ಕಾದಂಬರಿಯು ೨೦೦೨ರಿಂದ ಗುಲ್ಬರ್ಗಾ ವಿಶ್ವವಿದ್ಯಾಲಯದ ಎಂ.ಎ. ಅಂತಿಮಕ್ಕೆ ಪಠ್ಯವಾಗಿದೆ. |
| ದೂರದರ್ಶನ | : | ಜೀವನಚಕ್ರ ಧಾರವಾಹಿ, ಅವ್ವನಾಟಕ, ನೀಲಗಂಗಾ ಸತ್ತ ಹೆಣ್ಣಿನ ಸುತ್ತ ಕಥಾನಾಟಕ. |
| ಗೌರವ ಸನ್ಮಾನ ಪ್ರಶಸ್ತಿಗಳು | : | ೨೦೦೧ರಲ್ಲಿ ಬದುಕು ಕಾದಂಬರಿಗೆ ಮಾಣಿಕಬಾಯಿ ಪಾಟೀಲ್ ಪ್ರತಿಷ್ಠಾನದ ಪ್ರಶಸ್ತಿ ಸರ್.ಎಂ.ವಿಶ್ವೇಶ್ವರಯ್ಯ ದಶಮಾನೋತ್ಸವ ಸಾಹಿತ್ಯ ಪ್ರಶಸ್ತಿ ಮತ್ತು ಕನ್ನಡ ಸಾಹಿತ್ಯ ಪರಿಷತ್ತಿನ ಪದ್ಮಶ್ರೀ ಬಿ.ಸರೋಜಾದೇವಿ ಸಾಹಿತ್ಯ ಪ್ರಶಸ್ತಿ.<br>೨೦೦೨ರಲ್ಲಿ ಬದುಕು ಕಾದಂಬರಿಗೆ ಗುಲ್ಬರ್ಗಾ |

ವಿಶ್ವವಿದ್ಯಾಲಯದ ರಾಜ್ಯೋತ್ಸವ ಪ್ರಶಸ್ತಿ ೨೦೦೪ರಲ್ಲಿ ಬದುಕು ಕಾದಂಬರಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕನ್ನಡ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ನಾಡೋಜ ಪ್ರಶಸ್ತಿ ೨೦೧೧ರಲ್ಲಿ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಗದಗ ಇದರ ಅಧ್ಯಕ್ಷ ಸ್ಥಾನ.

ಇನ್ನೂ ವಿವಿಧ ಸಂಘ ಸಂಸ್ಥೆಗಳಿಂದ ಸನ್ಮಾನಗಳಾಗುತ್ತಿವೆ. ಒಟ್ಟಾರೆಯಾಗಿ ಸಾಹಿತ್ಯ ಸೃಷ್ಟಿಯ ಮೇರು ಲೇಖಕಿಯಾದ ಗೀತಾ ಅವರ ಕೃತಿಗಳು ಮಾನವೀಯ ಗುಣಗಳಿಗೆ ಕೈಗನ್ನಡಿಯಾಗಿವೆ. ಅವರ ಸಾಹಿತ್ಯಿಕ ಸಾಧನೆ ಹಾಗೂ ಸಾಮಾಜಿಕ ಕಳಕಳಿಯನ್ನು ಅವಲೋಕಿಸಿ, ೨೦೧೧ರ ಫೆಬ್ರವರಿಯಲ್ಲಿ ಗದಗದಲ್ಲಿ ನಡೆದ ಎಪ್ಪತ್ತಾರನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಅವರಿಗೆ ನೀಡಲಾಯಿತು. ನಾಡು ನುಡಿಯ ಬಗೆಗಿನ ಜನ ಜಾಗೃತಿಯ ರಥವನ್ನು ಯಶಸ್ವಿಯಾಗಿ ಮುನ್ನೆಡೆಸಿದ ಹೆಗ್ಗಳಿಕೆ ಅವರದು. ಇನ್ನೂ ಅವರಲ್ಲಿ ಸೃಜಶೀಲತೆ ಕುಗ್ಗಿಲ್ಲ.

ಅನುಬಂಧ–೨

## ಶ್ರೀಮತಿ ಗೀತಾನಾಗಭೂಷಣರ ಕಾದಂಬರಿಗಳು

ಕಾದಂಬರಿಗಳು

| | | |
|---|---|---|
| ೧. | ತಾವರೆಯ ಹೂವು | ೧೯೬೮ |
| ೨. | ಚಂದನದ ಚಿಗುರು | ೧೯೬೯ |
| ೩. | ಮಹಾಮನೆ | ೧೯೭೦ |
| ೪. | ಮರಳಿನ ಮನೆ | ೧೯೭೧ |
| ೫. | ಸಪ್ತವರ್ಣದ ಸ್ವಪ್ನ | ೧೯೭೩ |
| ೬. | ಮಾಪುರ ತಾಯಿಯ ಮಕ್ಕಳು | ೧೯೭೮ |
| ೭. | ಹಸಿಮಾಂಸ ಮತ್ತು ಹದ್ದುಗಳು | ೧೯೭೮ |
| ೮. | ಆಘಾತ | ೧೯೮೦ |
| ೯. | ಅವಾಂತರ | ೧೯೮೨ |
| ೧೦. | ಚಿಕ್ಕಿಯ ಹರೆಯದ ದಿನಗಳು | ೧೯೮೩ |
| ೧೧. | ಬದಲಾಗುವ ಬಣ್ಣಗಳು | ೧೯೮೪ |
| ೧೨. | ನೀಲಗಂಗಾ | ೧೯೮೬ |
| ೧೩. | ಪ್ರೀತಿಸಿದ್ದು ನಿನ್ನನ್ನೇ | ೧೯೮೬ |
| ೧೪. | ಮೋಹಪ್ವಾ | ೧೯೮೬ |
| ೧೫. | ನಿನ್ನ ತೋಳುಗಳಲ್ಲಿ | ೧೯೮೭ |
| ೧೬. | ನಿನ್ನೊಲವು ನನಗಿರಲಿ | ೧೯೮೭ |
| ೧೭. | ಸವತಿ ಶ್ರೀಗಂಧ | ೧೯೮೮ |
| ೧೮. | ನನ್ನ ನಿನ್ನ ನಡುವೆ | ೧೯೯೨ |
| ೧೯. | ಚೈತ್ರದ ಹಾಡು | ೧೯೯೩ |
| ೨೦. | ಧುಮ್ಮಸು | ೧೯೯೪ |
| ೨೧. | ಏರಿಳಿತಗಳು | ೧೯೯೬ |
| ೨೨. | ನನ್ನ ಒಲವು ನಿನ್ನ ಚೆಲುವು | ೧೯೯೭ |
| ೨೩. | ದಂಗೆ | ೧೯೯೭ |
| ೨೪. | ಅಭಿಮಾನ | ೧೯೯೮ |
| ೨೫. | ಬದುಕು | ೨೦೦೧ |
| ೨೬. | ಕಾಗೆ ಮುಟ್ಟಿತು | ೨೦೦೨ |
| ೨೭. | ಬಾಕಿ | ೨೦೧೨ |

ಅನುಬಂಧ–೩

## ಪರಾಮರ್ಶನ ಗ್ರಂಥಗಳು


೧. ಅನುಪಮಾ ಎಚ್.ಎಸ್, ಹೆಣ್ಣು, ಲಡಾಯಿ ಪ್ರಕಾಶನ ಗದಗ, ೨೦೧೩
೨. ಇಂದಿರಾ ಎಸ್, ಮಹಿಳೆ ಮತ್ತು ಸವಾಲುಗಳು, ಶೃತಿ ಲೋಕ ಪ್ರಕಾಶನ, ಮೈಸೂರು, ೨೦೧೦
೩. ಉಷಾ ಎಂ, (ಸಂ), ಆಧುನಿಕ ಮಹಿಳಾ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨
೪. ಉಷಾ ವಿಜಯಾ ಮೊಳೆಯಾರ, ಸ್ತ್ರೀವಾದಿ ಚಿಂತನೆ, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪
೫. ಕವಿತಾ ರೈ, ಮಹಿಳೆ: ಅಸ್ತಿತ್ವದ ಸಂಕಥನ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೫
೬. ಗವಿಸಿದ್ದಪ್ಪ ಎಚ್. ಪಾಟೀಲ (ಸಂ) ಪುರಸ್ಕೃತ ಕೃತಿಗಳ ಸಮೀಕ್ಷೆ, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೨
೭. ಗವೀಶ ಹಿರೇಮಠ (ಸಂ), ಮಹಿಳೆ ಮತ್ತು ಆಧುನಿಕತೆ, ಸಂಗಮೇಶ್ವರ ಮಹಿಳಾ ಮಂಡಳ, ಗುಲ್ಬರ್ಗಾ, ೨೦೦೮
೮. ಗಾಯತ್ರಿ ಎನ್, ಗೀತಾನಾಗಭೂಷಣ ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೯
೯. ಗೀತಾನಾಗಭೂಷಣ, ಬದುಕು ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೧
೧೦. ಗೀತಾನಾಗಭೂಷಣ., ಬಾಕಿ ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೨
೧೧. ಚಲವಾದಿ ಮಂಜುಳಾ, ಸದಾಶಿವಮರ್ಜಿ (ಪ್ರ.ಸಂ); ದಲಿತ ಮಹಿಳೆಯರು, ಶ್ರೀ ಮಾಲತೇಶ್ ಪ್ರಕಾಶನ, ಕಲ್ಬುಗಿ, ೨೦೧೩
೧೨. ಜವರಯ್ಯ ಮ.ನ, ದಲಿತ ಬಂಡಾಯ ಸಾಹಿತ್ಯ ಸಿದ್ಧಾಂತದ ನೆಲೆಗಳು, ಬಹುಜನ ಮಾಧ್ಯಮ ಕೇಂದ್ರ, ಮೈಸೂರು, ೨೦೦೮
೧೩. ನಾಗಮಣಿ ಎಸ್. ರಾವ್, ಸ್ತ್ರೀ ಪಥ, ನವಕರ್ನಾಟಕ ಪ್ರಕಾಶ ಬೆಂಗಳೂರು, ೨೦೧೨
೧೪. ನಾಗರಾಜ ಡಿ.ಆರ್., ಅಮೃತ ಮತ್ತು ಗರುಡ, ಅಕ್ಷರ ಪ್ರಕಾಶನ, ಹೆಗ್ಗೋಡು, ೨೦೦೯
೧೫. ನಾಗರಾಜ ಎಂ.(ಪ್ರ.ಸಂ); ಮಹಿಳಾ ವಿಮರ್ಶೆ ಸಂಕೀರ್ಣ ಸಂಕಲನಗಳು, ಪ್ರಸಾರಾಂಗ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ, ೨೦೧೩, (ಸಂ.೫)
೧೬. ನೇತ್ರಾವತಿ ಕೆ.ವಿ., ದಲಿತ ಮಹಿಳಾ ಸಂಕಥನ, ಸಖಿ ಪ್ರಕಾಶನ, ಹೊಸಪೇಟೆ, ೨೦೧೨
೧೭. ಪೂರ್ವಾಚಾರ್ ಎಂ, ಅಶೋಕ ವಿ., (ಪ್ರ.ಸಂ); ಸ್ತ್ರೀಸಂವೇದನೆ, ಅನ್ನಪೂರ್ಣ ಪಬ್ಲಿಷಿಂಗ್ ಹೌಸ್, ಬೆಂಗಳೂರು, ೨೦೧೪

೧೮. ಪೋತೆ ಎಚ್.ಟಿ., ದಲಿತ ಸಾಹಿತ್ಯ ಸಂಸ್ಕೃತಿ, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೧೧

೧೯. ಮಲ್ಲಿಕಾ ಘಂಟಿ, ದಲಿತ ಸಾಹಿತ್ಯ ಚಳುವಳಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮

೨೦. ಮಲ್ಲಿಕಾ ಘಂಟಿ, ನಮ್ಮ ಕಣ್ಣಲ್ಲಿ ನೀವು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೮

೨೧. ಮಲ್ಲೇಪುರಂ ಜಿ.ವೆಂಕಟೇಶ್ (ಸಂ), ತೌಲನಿಕ ಸಾಹಿತ್ಯಾಧ್ಯಯನ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು, ೨೦೦೮

೨೨. ಮುನಿವೆಂಕಟಪ್ಪ ವಿ., (ಸಂ), ದಲಿತ ಸಾಹಿತ್ಯ ಕೋಶ, ಲಿಖಿತ್ ಪ್ರಕಾಶನ, ಮೈಸೂರು, ೨೦೧೩

೨೩. ಮಂಗಳಾ ಪ್ರಿಯದರ್ಶಿನಿ, ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಮಹಿಳಾ ಅಧ್ಯಯನ ಕೇಂದ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೨೪. ರತ್ನಮ್ಮ ಕೆ.ಎಸ್. ಸ್ತ್ರೀಲೇಖ, ಶ್ರೀಕ್ಷೇತ್ರ ಪ್ರಕಾಶನ, ಮೈಸೂರು, ೨೦೦೫

೨೫. ಶಿವಾನಂದ್. ಎಸ್. ವಿರಕ್ತಮಠ, (ಸಂ) ಮಹಿಳಾ ಅಧ್ಯಯನ, ಸಂಯುಕ್ತ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೫

೨೬. ಶೈಲಜಾ ಹಿರೇಮಠ, ಸ್ತ್ರೀ ಕಥನ, ಭುವನ ಪ್ರಕಾಶನ, ಹೊಸಪೇಟೆ, ೨೦೦೩

೨೭. ಷರೀಫಾ, ಬಸವರಾಜ ಸೂಳಿಬಾವಿ (ಸಂ), ಮಹಿಳಾ ಮಾರ್ಗ, ಲಡಾಯಿ ಪ್ರಕಾಶನ, ಗದಗ, ೨೦೧೦

೨೮. ಸರಸ್ವತಿ ದು., (ಸಂ), ನೀರದಾರಿ, ಕವಿ ಪ್ರಕಾಶನ. ಉತ್ತರ ಕನ್ನಡ, ೨೦೧೪

೨೯. ಸಿದ್ರಾಮ ಕಾರಣಿಕ., ದಲಿತ ಬಂಡಾಯ ಕಥಾ ಸಾಹಿತ್ಯದಲ್ಲಿ ಸಾಮಾಜಿಕ ಪ್ರಜ್ಞೆ, ಜ್ಯೋತಿ ಪ್ರಕಾಶನ, ಮೈಸೂರು, ೨೦೧೦

೩೦. ಸುಶೀಲಮ್ಮ ಜಿ.ಎಸ್, ಬಂಡಾಯ ಸಾಹಿತ್ಯ ನಿಯತಕಾಲಿಕೆಗಳು, ಸಿದ್ಧಿ ಪ್ರಕಾಶನ, ಮೈಸೂರು, ೨೦೧೦

೩೧. ಹರೀಶ್ ಜಿ.ಬಿ. (ಸಂ), ಕರ್ನಾಟಕ ಸಾಹಿತ್ಯ ಸಂಗಾತಿ, ವಸಂತ ಪ್ರಕಾಶನ, ಬೆಂಗಳೂರು, ೨೦೧೫

**ಅಪ್ರಕಟಿತ ಗ್ರಂಥಗಳು**

೧. ನಾಗೇಶ್ ಎನ್, ಬದಕು ಕಾದಂಬರಿ ಹೆಣ್ಣು; ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಅಪ್ರಕಟಿತ ಎಂ.ಫಿಲ್ ನಿಬಂಧ, ೨೦೧೨

೨. ಮಧು ಆರ್.ಎಸ್., ಡಾ.ಗೀತಾನಾಗಭೂಷಣರವರ ಬದುಕು ಕಾದಂರಿಯಲ್ಲಿ ಸಾಮಾಜಿಕ ಪ್ರಜ್ಞೆ ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಎಂ.ಫಿಲ್. ನಿಬಂಧ, ೨೦೧೦

೩. ಸೌಮ್ಯ ಡಿ.ಕೆ., ಗೀತಾನಾಗಭೂಷಣರ ಕಾದಂಬರಿಗಳಲ್ಲಿ ಪ್ರತಿಭಟನಾತ್ಮಕ ನೆಲೆಗಳು, ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಅಪ್ರಕಟಿತ ಎಂ.ಫಿಲ್. ನಿಬಂಧ, ೨೦೧೦

